ಪುಸ್ತಕ ಭಂಡಾರ ಮಾಲೆ—೩

# ವ್ಯವಹಾರಧರ್ಮ

ವಿ. ಸೀತಾರಾಮಯ್ಯ, ಎಂ.ಎ.



ಪುಸ್ತಕ ಭಂಡಾರ ಮಾಲೆ—೩

# ವ್ಯವಹಾರಧರ್ಮ

ವಿ. ಸೀತಾರಾಮಯ್ಯ

ಸಂಸ್ಥಾನದ ವಯಸ್ಕರ ಶಿಕ್ಷಣ ಸಮಿತಿ
ಮೈಸೂರು
೧೯೪೭

# ಮೊದಲ ಮಾತು

ಇಲ್ಲಿನ ಮೂರು ಭಾಗಗಳಲ್ಲಿ ನಮ್ಮವರು ಯಾವುದನ್ನು 'ವ್ಯವಹಾರ ಧರ್ಮ' ವೆಂದು ಕರೆಯುತ್ತಿದ್ದರೊ ಅದರ ಕೆಲವು ಭಾಗಗಳ ಲಘು ಪರಿಚಯವನ್ನು ಮಾಡಿಕೊಡುವ ಪ್ರಯತ್ನ ನಡೆದಿದೆ. ನಮ್ಮ ಧರ್ಮಶಾಸ್ತ್ರಗಳ ಸ್ವರೂಪವನ್ನು ತಿಳಿಸಿ ಕಾಲಕಾಲಕ್ಕೆ ಅವುಗಳಲ್ಲಿ ಹೇಗೆ ಅಗತ್ಯವಾದ ಮಾರ್ಪಾಡುಗಳು ಉಂಟಾಗಿವೆಯೆಂಬುದನ್ನು ಸೂಚಿಸಿದೆ. ಇವೊತ್ತಿನ ಪರಿಸ್ಥಿತಿಗೂ ಆವಶ್ಯಕತೆಗಳಿಗೂ ತಕ್ಕಂತೆ, ಧರ್ಮದ ಮೂಲಧಾತುವಿಗೆ ಅನುಗುಣವಾದ ಹೊಸ ತಿದ್ದುಪಾಡುಗಳನ್ನು ಮಾಡಿಕೊಳ್ಳಬಹುದು, ಹೊಸದಾಗಿ ಬೇಕಾದ್ದನ್ನು ಸೇರಿಸಿಕೊಳ್ಳಬಹುದು ಎಂಬುದರ ಸೂಚನೆ ಇದೆ. ಕಾನೂನಿನ ಸ್ವರೂಪ, ಅದರ ರಚನೆ ಸಂಸ್ಕರಣ ಹೇಗೆ ನಡೆಯುತ್ತದೆ, ಸಮಾಜ ಜೀವನದಲ್ಲಿ ಕಾನೂನಿನ ಸ್ಥಾನವೂ ವ್ಯಾಪ್ತಿಯೂ ಎಂಥವು ಎಂಬುದರ ವಿವರಣೆ ಇದೆ; ಕಾನೂನಿಗೂ ನ್ಯಾಯಕ್ಕೂ, ನ್ಯಾಯಕ್ಕೂ ಧರ್ಮಕ್ಕೂ ಇರುವ ಸಂಬಂಧಗಳನ್ನು ತಿಳಿಸಿ ಇವುಗಳ ವಿವೇಚನೆಗೆ ಒದಗುವ ಸಂಸ್ಥೆ, ಕ್ರಿಯಾ ವಿಧಾನಗಳನ್ನು ವರ್ಣಿಸುವ ಪ್ರಯತ್ನಮಾಡಿದೆ. ಅದು ಎಷ್ಟು ಫಲಿಸಿದೆಯೊ ಅದನ್ನು ಓದುವವರು ಕಾಣಬೇಕು.

ಇಷ್ಟೂ ನಾಡೊಂದರ ಒಳಗೆ ನಡೆಯುವ ವ್ಯವಹಾರ ತತ್ವವನ್ನೂ ವಿಧಾನಗಳನ್ನೂ ಕುರಿತ ಮಾತು. ನಾಡುನಾಡುಗಳಿಗೆ ನಡೆಯುವ ವ್ಯವಹಾರ ಸಂಬಂಧಗಳನ್ನೂ ಸಂಧಿವಿಗ್ರಹ ಮುಂತಾದ ಕಾರ್ಯಗಳನ್ನೂ ಕುರಿತು ಬರೆಯುವುದು ಇನ್ನೂ ಉಳಿದಿರುವ ಕೆಲಸ. ಇಂದು ಈ ವಿಚಾರಗಳ ಮಹತ್ವ ಹೆಚ್ಚಿನದು. ರಾಷ್ಟ್ರ ರಾಷ್ಟ್ರಗಳ ನಡುವೆ ವ್ಯವಹಾರ ನೀತಿ ಹೇಗೆ ಏರ್ಪಡುತ್ತಿದೆ; ಅಲ್ಲಿನ ಕಾರ್ಯವಿಧಾನ, ಮರ್ಯಾದೆಗಳು, ಸಂಸ್ಥೆಗಳು, ನಿರ್ಬಂಧಗಳು, ನ್ಯಾಯ ನಿರ್ಣಯ ರೀತಿ ಇವು ಬೇಕಾದಷ್ಟು ಪರಿಚಯವಾಗದಿದ್ದರೆ ನಮ್ಮ ತಿಳಿವಳಿಕೆಯಲ್ಲಿ ಲೋಪ ಉಳಿಯುವುದು. ಅವುಗಳನ್ನು ಕುರಿತೂ ಮುಂದೆ ಯಾವಾಗಲಾದರೂ ನಾಲ್ಕು ಮಾತುಗಳನ್ನು ಹೇಳಬೇಕೆಂದಿದೆ. ಕಾಲ ಅನುಕೂಲ ಒದಗಿದಾಗ ಅದನ್ನು ಮಾಡಬಹುದು.

ಈಗ ಇಷ್ಟನ್ನು ಹೇಳುವುದಕ್ಕೆ ಅವಕಾಶಕೊಟ್ಟು, ಇದನ್ನು ಪ್ರಕಟಿಸಿದ ನಮ್ಮ ಸಂಸ್ಥಾನದ ವಯಸ್ಕರ ವಿದ್ಯಾಶಿಕ್ಷಣ ಸಮಿತಿಯ ಅಧಿಕಾರಿಗಳಿಗೆ ನಾನು ಋಣಿಯಾಗಿದ್ದೇನೆ. ಹಾಗೆಯೇ ಇದನ್ನು ಅಚ್ಚಿಗೆ ಸಿದ್ಧಮಾಡುವ ಕೆಲಸದಲ್ಲಿ ನೆರವಾದ ಶ್ರೀ ವಿ. ಸತ್ಯನಾರಾಯಣ ಅವರಿಗೂ, ಶ್ರೀ ಬಿ. ಎಸ್. ವೆಂಕಟರಾಯರಿಗೂ ನನ್ನ ವಿಶೇಷ ವಂದನೆಗಳು.

ವಿ. ಸೀತಾರಾಮಯ್ಯ.

# ವಿಷಯ ಸೂಚಿಕೆ

# ಧರ್ಮಶಾಸ್ತ್ರ

ಭರತಖಂಡವು ಸಾವಿರಾರು ವರ್ಷಗಳಿಂದ ನಾಗರಿಕತೆಗೆ ಹೆಸರಾದ ದೇಶ. ಇಲ್ಲಿನ ಜನರ ಚರಿತ್ರೆ ಇತರ ದೇಶಗಳವರ ಚರಿತ್ರೆಗಿಂತ ವಿಶೇಷವಾದ ಕೀರ್ತಿಯನ್ನು ಪಡೆದಿದೆ. ಚೀನಾದೇಶ ಒಂದನ್ನು ಬಿಟ್ಟರೆ ಉಳಿದ ಯಾವ ದೇಶಕ್ಕೂ ಇಷ್ಟು ದೊಡ್ಡ, ಇಷ್ಟು ಹಿಂದಿನ ಕಥೆ ಇಲ್ಲ. ಇಲ್ಲಿನ ವಿದ್ಯೆ, ಸಂಪತ್ತು, ನಯಜೀವನ ಇವನ್ನು ದೇಶ ವಿದೇಶಗಳವರು ಕೊಂಡಾಡಿದ್ದಾರೆ. ಇಂದು ಈ ದೇಶದ ಬದುಕು ಇನ್ನೂ ಕೆಳಮಟ್ಟದಲ್ಲಿದೆ; ಸೊರಗಿದೆ. ಆದರೆ ಬುಹು ಕಾಲದ ಅದರ ಚರಿತ್ರೆ ಅದಕ್ಕೆ ಒಂದು ಗೌರವವನ್ನೂ, ಶಕ್ತಿಯನ್ನೂ ತಂದಿವೆಯೆಂದರೆ ತಪ್ಪಲ್ಲ. ಈ ಆಧಾರದ ಮೇಲೆಯೇ ಇಂದಿನ ಭಾರತೀಯರು ಮುಂದಿನ ಬಾಳನ್ನು ಬೆಳೆಸಲು ಬಯಸುತ್ತಿರುವುದು ; ನಿಲಿಸಲು ದುಡಿಯುತ್ತಿರುವುದು.

ನಾಡಿನ ಬದುಕು ಎಂದರೆ ಬರಿಯ ಹತ್ತುಜನರ ಬೇರೆ ಬೇರೆ ಬದುಕಿನ ಕಥೆಯಲ್ಲ. ಅವುಗಳ ಜೊತೆಗೆ ಅವರು ಮಾಡಿದ ಯೋಚನೆ, ಆಡಿದ ಮಾತು, ನಡೆದ ನಡವಳಿಕೆ ಸೇರುತ್ತವೆ. ಅವರ ಆಸೆ, ಉತ್ಸಾಹ, ಸಾಧನೆ, ಸೋಲು, ಅಪಮಾನ ಸೇರುತ್ತವೆ. ಅವರು ಕಟ್ಟಿದ ಕೆರೆ, ಕಟ್ಟೆ, ಕಾಲುವೆ ; ಕೋಟೆ, ಸೇತುವೆ, ಅರಮನೆ, ಗುರುಮನೆ, ಗುಡಿ, ಗೋಪುರ ; ಹಾಸಿದ ರಸ್ತೆ; ನಟ್ಟ ಸಾಲುಮರ, ತೋಪು ; ನಡಿಸಿದ ಸತ್ರ, ಅರವಟ್ಟಿಗೆ, ಮಾಡಿದ ದಾನಧರ್ಮ ; ಗೆದ್ದ ಸೋತ ಯುದ್ಧತಂತ್ರ ಸೇರುತ್ತವೆ ; ಶಾಂತಿಕಾಲದ ಸುಖಜೀವನಕ್ಕೂ, ಸುರಕ್ಷಣೆಗೂ ಏನೇನೂ ಅಗತ್ಯವೋ ಅದನ್ನೆಲ್ಲ ಅವರು ಯಾವ ರೀತಿ ಒದಗಿಸಿಕೊಳ್ಳುತ್ತಿದ್ದರು, ಅದರಿಂರ ಯಾವ ಬಗೆಯ ನಯವನ್ನೂ ಹದವನ್ನೂ ಉಂಟುಮಾಡಿಕೊಂಡರು ಎಂಬ ಅಂಶ ಸೇರುತ್ತದೆ. ಯುದ್ಧ ಕಾರ್ಯದಲ್ಲಿಯೂ, ಆತ್ಮರಕ್ಷಣೆಯಲ್ಲಿಯೂ, ಹೇಗೆ ತೊಡಗಿ ಗೆಲವು-

ಬಾಳು ಬಾಳುತ್ತಿದ್ದರು ಎಂಬುದೂ ಇದಕ್ಕೆ ಸಂಬಂಧಿಸಿದುದೇ. ಇವೆಲ್ಲ
ಹೊಂದುವಂತಹ ಯಾವ ಯಾವ ಸಂಸ್ಥೆಗಳನ್ನು ಅವರು ಕಟ್ಟಿಕೊಂಡ
ತಮ್ಮ ತಮ್ಮೊಳಗೂ ಇತರರಲ್ಲಿಯೂ ಯಾವ ರೀತಿ ನಡೆದುಕೊಂಡು ಸಾಧ
ವಾದ ಬದುಕನ್ನು ಬದುಕುತ್ತಿದ್ದರು? ಅವರ ಮನಸ್ಸಿನ ಪ್ರವ
ಎಂಥಾದ್ದು? ಯಾವುದು ಅವರನ್ನು ಉತ್ಸಾಹಗೊಳಿಸಿ ಶ್ರದ್ಧಾವಂ
ನ್ನಾಗಿ ಮಾಡಿತ್ತು? ಯಾವುದರ ರಕ್ಷಣೆಗಾಗಿಯೂ, ಸಾಧನೆಗಾಗಿಯ
ಬದುಕಲು ಸಿದ್ಧರಿದ್ದರು? ಅಗತ್ಯಬಿದ್ದರೆ ಯಾವುದಕ್ಕಾಗಿ ಸಾಯ
ಸಿದ್ಧರಾಗುತ್ತಿದ್ದರು? ಯಾವುದರ ಕಡೆ ಅವರ ಮನಸ್ಸು ಒಲಿಯುತ್ತಿ
ಲಿಲ್ಲ—ಎಂಬವನ್ನು ತಿಳಿದರೆ ನಾಡಿನ ಜೀವನದ ಸ್ವರೂಪ ಗೊತ್ತಾ
ವುದು. ಈ ಎಲ್ಲ ಬಗೆಯಲ್ಲಿಯೂ ಭರತಖಂಡದ ಜನ ಯಾವುದು ದೊ
ದೆಂದು ಭಾವಿಸಿದ್ದರೋ ಅದು ಅವರ ಆಚಾರ, ವ್ಯವಹಾರ, ಸಂ
ದಾಯ, ವಿದ್ಯೆ, ಇವುಗಳಲ್ಲಿ ಪ್ರತಿಫಲಿಸಿದೆ. ಅದರ ಜೀವನಾಡಿ ಅ
ಗಳಲ್ಲಿ ಸ್ಪಷ್ಟವಾಗಿ ಮಿಡಿಯುತ್ತಿದೆ. ಅವುಗಳ ಕಥೆಯನ್ನು ಅರಿತರೆ ಭ
ಖಂಡದ ಧರ್ಮದ ಕಥೆಯನ್ನು ಅರಿತಂತೆ.

ಭರತಖಂಡವು ಒಪ್ಪಿ ನಡಸಿದ ಧರ್ಮವಾವುದು? ಅದರ ಲಕ್ಷಣಗ
ಯಾವುವು ಎಂಬುದನ್ನು ತಿಳಿಯುವುದಕ್ಕೆ ಮುಂಚೆ ಒಂದು ವಿಶೇಷ ಸಂಗ
ಯನ್ನು ಇಲ್ಲಿ ಸೂಚಿಸಬಹುದು. ಇಲ್ಲಿನ ನಾಗರಿಕತೆಯಲ್ಲಿ ಆರ್ಯ, ದ್ರಾವಿ
ಎನ್ನುವ ಎರಡು ರಕ್ತಗಳು ಸೇರಿವೆ. ಯಾವ ಕಾಲದಲ್ಲಿ ಇಲ್ಲಿಗೆ ಆರ್ಯರ
ದ್ರಾವಿಡರೂ ಬಂದರೋ, ಇದ್ದು ತಮ್ಮ ಲೌಕಿಕಬಾಳನ್ನು ಬೆಸೆದರೋ
ಗೊತ್ತಿಲ್ಲ. ಇವರಲ್ಲದೆ ಬೇರೆ ಯಾರಾದರೂ ಮೂಲ ನಿವಾಸಿಗಳು ಇ
ದ್ದರೋ ಅದನ್ನೂ ನಾವು ಖಚಿತವಾಗಿ ಹೇಳುವಹಾಗಿಲ್ಲ. ಇದು ನಿಶ್ಚಯ
ಮೊದಲಿಂದಲೂ ಎರಡು ಮೂರು ಬಗೆಯ ಸಂಸ್ಕೃತಿಗಳು ಈ ನಾಡಿನ
ಸೇರಿ ಬೆರೆತಂತೆ ತೋರುತ್ತದೆ. ಆಮೇಲೆ ಒಂದು ಕಾಲದಲ್ಲಿ ಒಳಗಿಂದಲ
ಬೌದ್ಧಪಂಥ ಒಂದು, ಜೈನಪಂಥ ಒಂದು ಹುಟ್ಟಿಕೊಂಡವು. ಸ್ವ

ಕಾಲವಾದ ಮೇಲೆ ಮಧ್ಯ ಏಷಿಯಾದಲ್ಲಿನ ಇರಾನ್ ದೇಶದಿಂದ ಬೆಂಕಿಯ ಪೂಜೆಮಾಡುವ ಪಾರ್ಸಿ ಜನರು ಇಲ್ಲಿಗೆ ಬಂದು ಆಸರೆ ಪಡೆದರು; ಬೊಂಬಾಯನ್ನು ತಮ್ಮ ನೆಲೆಯಾಗಿ ಮಾಡಿಕೊಂಡರು. ಅಲ್ಲಿಂದ ಈಚೆಗೆ ನಾಲ್ಕಾರು ಬಗೆಯ ಶೈವ, ವೈಷ್ಣವ, ಪಂಗಡಗಳು ಹುಟ್ಟಿಕೊಂಡವು. ಪಾರ್ಸಿ ಮಾರ್ಗವನ್ನು ಬಿಟ್ಟರೆ ಉಳಿದ ಇವುಗಳೆಲ್ಲ ಒಂದು ಬಗೆಯಲ್ಲಿ ಹಿಂದಿನ ಸಂಪ್ರದಾಯಗಳ ವಿಶೇಷ ರೂಪಗಳು, ಕವಲುಗಳು ಎನ್ನಬಹುದು. ಆದರೆ ಸುಮಾರು ಹತ್ತು ಹನ್ನೊಂದನೆಯ ಶತಮಾನದಿಂದ ಈಚೆಗೆ ಇಲ್ಲಿ ದಾಳಿ ಬಂದು ದರ್ಪಹೂಡಿದ ಇಸ್ಲಾಂ ಪಂಥವು ಹೊರಗಿಂದ ಬಂದದ್ದು. ಅಂಥದೇ ಇನ್ನೊಂದು ಕ್ರೈಸ್ತಮತ. ಇವುಗಳ ವಿರೋಧ ದಿಂದಲೋ, ಇವುಗಳ ಅನುಕರಣದಿಂದಲೋ, ಹುಟ್ಟಿದ ಪಂಥಗಳೂ; ಸೆಳೆಗಳೂ ಬೇರೆ ಇವೆ. ಇವೆಲ್ಲಕ್ಕೂ ಬೇರೆ ಬೇರೆ ಮತಗ್ರಂಥ, ಗುರು ಪರಂಪರೆ, ಕಟ್ಟು ನಿಯಮ, ನ್ಯಾಯ ನೀತಿ ಇವೆ. ಭರತಖಂಡದ ಧರ್ಮಸಂಪ್ರದಾಯವೆಂದರೆ ಇಂದು ಇವೆಲ್ಲವನ್ನೂ ಕುರಿತು ಮಾತನಾಡ ಬೇಕು. ಇವೆಲ್ಲವೂ ಸೇರಿ ಇಂದು ಇಂಡಿಯಾದೇಶದ ಧರ್ಮಜೀವನ ಒಂದು ರೂಪಕ್ಕೆ ಬರಬೇಕಾಗಿದೆ. ಇವೊತ್ತಿನ ರಾಜಕೀಯ ಜೀವನದ ಲ್ಲಂತೂ ಇವೆಲ್ಲಕ್ಕೂ ಸ್ಥಾನವಿದೆ, ಮಾನವಿದೆ. ಕಾನೂನುಗಳಲ್ಲಿಯೂ, ಜನದ ಆಶೋತ್ತರಗಳಲ್ಲಿಯೂ ಈ ಎಲ್ಲವುಗಳ ಅಂಶವೂ ಆಕಾಂಕ್ಷೆಯೂ ಇವೆ. ಇನ್ನೂರು ವರ್ಷಗಳ ಹಿಂದೆ ಈ ದೇಶಕ್ಕೆಲ್ಲ ಸರ್ವ ಸಾಮಾನ್ಯ ನಾಗಿ ನಡೆಯಬಲ್ಲ ಒಂದು ಕಾನೂನು ಪದ್ಧತಿ ಇರಲಿಲ್ಲ. ಒಂದು ಬಗೆಯ ಪ್ರಮಾಣ ದಂಡಶಾಸನ ಇರಲಿಲ್ಲ. ಇವೊತ್ತಿನ ನ್ಯಾಯಾಸ್ಥಾನಗಳಲ್ಲಿ ಬಳಕೆ ಯಲ್ಲಿರುವ ಶಾಸನಗಳು, ಕಾರ್ಯವಿಧಾನಗಳು, ಸಮಯಗಳು, ತೀರ್ಮಾನ ಪದ್ಧತಿಗಳು, ಇವೆಲ್ಲ ಇಂಗ್ಲಿಷ್ ಜನರ ಕೈವಾಡದಲ್ಲಿ ಕಟ್ಟಿ ಕುದುರಿದವು. ಆ, ಈ ಪಂಥದವರಿಗೇ ಸಲ್ಲುವ ವಿಶೇಷ ಮರ್ಯಾದೆಗಳೂ, ನಿಬಂಧನೆಗಳೂ ಕಾನೂನು ಮೊದಲಿನಂತೆಯೇ ಇಂದೂ ಉಂಟು. ಅವರವರಿಗೇ ಬೇರೆ

ಬೇರೆಯಾದ ನೋಟದ ರೀತಿ ಇದೆ. ಆದರೂ ಒಟ್ಟು ಎಲ್ಲರಿಗೂ ವಿಧಾ
ವಾಗಿ ಒಂದು ಸಾಮಾನ್ಯ ರಾಜಶಾಸನ ನಾಡಿನವರ ಜೀವನದ ಎಲ್ಲ ವಿ
ಗಳನ್ನೂ ಇಂದು ಆಳುತ್ತದೆ. ಅದರ ಮೇಲೆ ಬೇರೆ ಯಾರ, ಯ
ಮಾತೂ ನಡೆಯದು. ಎಂದರೆ ರಾಜಶಾಸನಗಳ ಅಂಗವಾಗಿ ಬೇರೆ ಬ
ಮತಧರ್ಮ, ಮತ್ತು ಸಾಮಾಜಿಕ ಪಂಗಡಗಳ ನಿಯಮಗಳು ಸೇರಿಕೊಂಡಿ
ಅದಕ್ಕೆ ವಿರೋಧವಾಗದೆ ನಡೆದರೆ ಮಾತ್ರ ಅವಕ್ಕೆ ಬೆಲೆ. ಅವಕ
ಇವಕ್ಕೂ ಕೋಟಲೆ ಬಂದರೆ ರಾಜಶಾಸನ ಒಪ್ಪುವ ಅಂಶಗಳಿಗೇ ಮೇಲ್

**ಹಿಂದೂ ಜನ.**—ಭರತಖಂಡದ ಇಂದಿನ ಜನದ ಬಹುಭಾಗ ಹಿಂದ
ಹಿಂದೂ ಎಂಬ ಪದ ಈಚಿನದು. ಇವೊತ್ತಿನ ಅಗತ್ಯಗಳಿಗೆ ಈ ಹೆಸ
ಸಲುವಳಿಯಾಗುತ್ತಿದೆ. ಸದ್ಯಕ್ಕೆ ನಾವು ಅದನ್ನು ಒಂದು ನಿಷ್ಕರ್ಷೆ ಉ
ಅರ್ಥದಲ್ಲಿ ಬಳಸುತ್ತಿದ್ದೇವೆ. (೧) ಕ್ರೀಸ್ತ, (೨) ಮುಸಲ್ಮಾ
(೩) ಪಾರ್ಸಿ, (೪) ಇತರ ಅನ್ಯದೇಶೀಯ ಪಂಥಗಳನ್ನು ಬಿ
ಉಳಿದ ಸುಮಾರು ಎಲ್ಲ ಜನರನ್ನೂ ಇಲ್ಲಿ ಹಿಂದೂಗಳೆನ್ನುತ್ತಿದ್ದೇ
ಇವರೆಲ್ಲರೂ, ಬಹುತರ, ಹಿಂದಿನ ಕಾಲದಿಂದ ಬಂದ ಆಚಾರ ವ್ಯವಹಾರ
ಕಟ್ಟುಪಾಡುಗಳಿಗೆ ಒಳಗಾಗಿ ನಡೆಯುತ್ತಿದ್ದಾರೆ. ಅವನ್ನು ಸುಮಾ
ನಮ್ಮವೆಂದು ಗುರುತಿಸಬಹುದು. ಹಿಂದೂಗಳೆಲ್ಲರಿಗೂ ಸಂಬಂಧಿಸಿ
ನಿಯಮ ನಿರ್ಬಂಧಗಳು **ಧರ್ಮಶಾಸ್ತ್ರ**ಗಳೆಂಬ ಗ್ರಂಥಗಳಲ್ಲಿ ಬರೆದಿಟ್ಟಿವೆ.

ಈ ಸುಮಾರು ಎಲ್ಲರೂ ವೇದ, ವೇದಾಂತ, ಧರ್ಮಶಾಸ್ತ್ರ, ಪುರಾ
ಭಾಗವತ, ರಾಮಾಯಣ, ಮಹಾಭಾರತ ಮುಂತಾದ ಇತಿಹಾಸ ಗ್ರಂಥ
ಭಗವದ್ಗೀತೆ, ಇವುಗಳನ್ನು ಒಪ್ಪುತ್ತಾರೆ; ಎಲ್ಲವನ್ನೂ ಒಪ್ಪದವ
ಕೆಲವನ್ನಾದರೂ ಒಪ್ಪಿ ನಡೆದುಕೊಳ್ಳುತ್ತಾರೆ; ಅಥವಾ, ಸುಮಾರು ಅದ
ಬಗೆಯ ದಿನಜೀವನದ ರೀತಿಯನ್ನು ತಿಳಿಸುವ ತಮ್ಮ ಮತಶಾಖೆಯ
ಗ್ರಂಥಗಳ ಅಧಿಕಾರವನ್ನು ಒಪ್ಪುತ್ತಾರೆ. ಇಹ ಪರ ಎಂಬ ವಿವೇಚ
ಯನ್ನು ಮಾಡುತ್ತಾರೆ. ಹಲವರು ಜನ್ಮಾಂತರವಿದೆ ಎಂಬುದನ್ನೂ

ದೇಹ ಜೀವನಕ್ಕೂ ಆತ್ಮಕ್ಕೂ ಬೇರೆ ಬೇರೆ ಲಕ್ಷಣಗಳನ್ನೂ ತಿಳಿದಿರುತ್ತಾರೆ. ಎಲ್ಲರೂ ಕರ್ಮಕ್ಕೆ ಒಂದುಬಗೆಯ ವಿಶೇಷ ಪ್ರಾಶಸ್ತ್ಯವನ್ನು ಕೊಡುತ್ತಾರೆ. ಸುಮಾರು ಎಲ್ಲರೂ ಒಂದು ಗುರುವರ್ಗವನ್ನೂ ಒಂದು ದೇವರವರ್ಗವನ್ನೂ, ಪೂಜೆ, ಪುರಸ್ಕಾರ ಪದ್ಧತಿಗಳನ್ನೂ ಅನುಸರಿಸುತ್ತಾರೆ. ಹಬ್ಬ, ವ್ರತ, ಜಾತ್ರೆ, ತೇರು, ಪಂಚಾಂಗ ಇವುಗಳನ್ನು ಬಳಕೆಯಲ್ಲಿ ಇಟ್ಟುಕೊಂಡಿರುತ್ತಾರೆ. ಗೋಪೂಜೆ, ಗಂಗಾಸ್ನಾನ, ಯಾತ್ರೆ, ದಾನ, ತಪಸ್ಸು, ಯೋಗಸಾಧನೆ, ಪ್ರಾಯಶ್ಚಿತ್ತ ಸಂನ್ಯಾಸ ಮುಂತಾದವುಗಳನ್ನು ಒಪ್ಪಿಕೊಳ್ಳುತ್ತಾರೆ. ಯಾವುದಾದರೂ ಮಡಿ, ಮೈಲಿಗೆ ಮತ್ತು ಶುಚಿಕರ್ಮಗಳನ್ನು ಗೌರವಿಸುತ್ತಾರೆ. ದೇವತೆಗಳಿಗೂ, ಹಿರಿಯರಿಗೂ, ಪಿತೃಗಳಿಗೂ, ನೆನಪಿನ ಪೂಜೆಯನ್ನು ಸಲ್ಲಿಸುತ್ತಾರೆ. ಮಹಾಲಯ ಅಮಾವಾಸ್ಯೆಯ ದಿನ ಪಿತೃಗಳಿಗೆ ಪೂಜೆ ಎರೆಯುತ್ತಾರೆ. ಎಡೆ, ದಾನ ಧರ್ಮ ಮಾಡುತ್ತಾರೆ. ಬಹುಮಟ್ಟಿಗೆ ಇವರ ದಿನಜೀವನದ ರೀತಿಯೂ, ಮುಂದಿನ ಲೋಕಕ್ಕೆ ಸಂಬಂಧಪಟ್ಟ ಆಶೆ ಭರವಸೆಗಳೂ, ಭಯಗಳೂ ಒಂದೇ ಬಗೆಯವು. ಹುಟ್ಟಿದಾಗ, ಹೆಸರಿಡುವಾಗ, ಮುಂಜಿ ಮದುವೆಗಳಲ್ಲಿ, ಸಂನ್ಯಾಸದಲ್ಲಿ, ಸಾವಿನಲ್ಲಿ, ಆಮೇಲಿನ ಸಂಸ್ಕಾರದಲ್ಲಿ, ಸ್ವರ್ಗನರಕ ಎಂಬ ನಂಬಿಕೆಯಲ್ಲಿ—ಈ ಎಲ್ಲ ಸುಮಾರು ಒಂದು ಗೊತ್ತಾದ ಕ್ರಮದಲ್ಲಿ ನಡೆಯುತ್ತವೆ. ಅವರಿವರಿಗೆ ಈ, ಆ ಅಂಶಗಳಲ್ಲಿಯೇನೊ ಭೇದವಿರುತ್ತದೆ. ಒಟ್ಟಿನಲ್ಲಿ ಮಾತ್ರ ಸುಮಾರು ಬದುಕಿನ ನಕ್ಷೆ ಮತ್ತು ಮಾದರಿ ಹೀಗೆ. ನಿನ್ನೆ ಮೊನ್ನೆಯವರೆಗೂ ಸುಮಾರು ಎಲ್ಲ ಹಿಂದುಗಳೂ ಕಿವಿಗೆ ಒಡವೆಯನ್ನು ಹಾಕಿಕೊಳ್ಳುತ್ತಿದ್ದರು. ಅದಕ್ಕಾಗಿ ಕಿವಿಯನ್ನು ಚುಚ್ಚಿದ ಗುರುತು ಇರುತ್ತಿತ್ತು. ತಲೆಯಲ್ಲಿ ಸ್ವಲ್ಪವಾದರೂ ಜುಟ್ಟಿರುತ್ತಿತ್ತು. ಹಣೆಯ ಮೇಲೆ ತಿಲಕವೊ ಚಂದನವೊ ಕುಂಕುಮವೊ ಇನ್ಯಾವುದಾದರೂ ಲಕ್ಷಣವೊ ಇರುತ್ತಿತ್ತು. ಮದುವೆಯಲ್ಲಿ ಧಾರೆಯೆರೆಯುವುದು, ಕಂಕಣ ಕಟ್ಟುವುದು ವಾಡಿಕೆ ಇತ್ತು. ಇವು ಕೂಡ ಹಿಂದೂಜಾತೀಯತೆಯ ಕುರುಹೆಂದು ಭಾವಿ

ಸುವುದು ವಾಡಿಕೆಯಾಗಿತ್ತು. ದಿನಜೀವನದಲ್ಲಿ ಹಲವು ಉಪಕಾರವ
ಮಾಡುತ್ತಿದ್ದ ಗೋವುಗಳ ಸೇವೆಗೂ ಒಂದು ಮನ್ನಣೆ ಇರುತ್ತಿ
ಮಾಂಸ ತಿನ್ನುವ ಹಿಂದುಗಳೂ ಕೂಡ ಹಸುವಿನ ಬಾಡನ್ನು ತಿನ್ನುತ್ತಿರಲಿ
ಹಸುವಿಗೆ ಬಹುಹಿರಿಯ ಭಕ್ತಿಯನ್ನು ಸಲ್ಲಿಸಿ ಅದರ ಮೂಲಕ ಸದ
ಗಳನ್ನು ಪಡೆದುಕೊಳ್ಳಬಹುದು ಎಂದು ಹೇಳುತ್ತಿದ್ದುದೂ ಉಂಟು.
ಎಲ್ಲ ಅಂಶಗಳಲ್ಲಿ ಪ್ರಧಾನ ಯಾವುದು, ಅಷ್ಟು ಮುಖ್ಯವಲ್ಲದ್ದು ಯಾವ
ಎಂದು ನಿರ್ಧರಿಸುವುದು ಸುಲಭವಲ್ಲ. ಕೆಲವಂಶಗಳು ಬಹು ಕಾಲದಿ
ಬಂದಿವೆ. ಕೆಲವು ಬೇರೆ ಬೇರೆ ಪಂಥಗಳಲ್ಲಿಯೂ, ಜನವರ್ಗಗಳಲ್ಲಿ
ಮಾತ್ರ ಇವೆ. ಕೆಲವು ಶಾಸ್ತ್ರಾಂಶಗಳು ; ಅವುಗಳಂತೆ ನಡೆಯದಿದ
ಯಾವುದಾದರೊಂದು ಬಗೆಯಲ್ಲಿ ನಷ್ಟ, ಅನಿಷ್ಟ ಉಂಟಾಗುತ್ತದೆ
ನಂಬಿಕೆ ಇತ್ತು. ಕೆಲವನ್ನು ಮೀರಿದರೆ ಸಮಾಜದಲ್ಲಿಯೂ, ರಾಜ
ಲ್ಲಿಯೂ ಶಿಕ್ಷೆಯನ್ನು ಅನುಭವಿಸಬೇಕಾಗಿತ್ತು. ಇನ್ನು ಕೆಲವು ಬರಿ
ರೂಢಿ ಅಥವಾ ಆಚಾರ. ಆದರೆ ಈ ಎಲ್ಲಕ್ಕೂ ಬಹು ಮಟ್ಟಿಗೆ ಜನ
ವಿಧೇಯರಾಗಿರುತ್ತಿದ್ದರು. ಅವನ್ನು ಮೀರಲು ಸಾಮಾನ್ಯವಾಗಿ ಆ
ತ್ತಿರಲಿಲ್ಲ. ಹೀಗೆ ಮಾಡತಕ್ಕದ್ದು ಹೀಗೆ ಮಾಡಬಾರದು ಎಂಬ ಸಂಗತಿಗ
ಸುಮಾರು ಎಲ್ಲ ಹಿಂದೂಗಳಿಗೂ ಒಂದು ಸಾಮಾನ್ಯವಾಗಿಯೂ, ಒಂ
ವಿಶೇಷ ರೀತಿಯಲ್ಲಿಯೂ ಅನ್ವಯಿಸುತ್ತಿದ್ದುವು. ಈ ಸಂಗತಿಗಳೇ ಬ
ಮಟ್ಟಿಗೆ ನಾವು ವಿವರಿಸುವ ವಿಷಯ.

ಬೌದ್ಧರನ್ನೂ ವೀರಶೈವರನ್ನೂ ಕೆಲವು ಭಕ್ತಿಪಂಥಗಳವರನ್ನೂ ಬಿಟ್ಟ
ಉಳಿದ ಎಲ್ಲರೂ ವರ್ಣಾಶ್ರಮ* ವ್ಯವಸ್ಥೆಯನ್ನು ಈವರೆಗೂ ಒಪ್ಪ
ದ್ದರು. ವರ್ಣ ಬೆರಕೆಯಾಗುವುದು ಕೆಡುಕೆನ್ನುತ್ತಿದ್ದರು. ಈಗ್ಗೆ ಕೆ
ಕಾಲದವರೆಗೂ ರಾಜರಿಗೆ ವರ್ಣಾಶ್ರಮಧರ್ಮ ಪರಿಪಾಲಕರು ಎ

* ವರ್ಣಗಳು ನಾಲ್ಕು : ಬ್ರಹ್ಮ, ಕ್ಷತ್ರಿಯ, ವೈಶ್ಯ, ಶೂದ್ರ. ಆಶ್ರಮಗಳು ನಾಲ
ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ, ಸಂನ್ಯಾಸ.

ಬಿರುದು ಇರುತ್ತಿತ್ತು. ಅವನ್ನು ಪಾಲಿಸಿ ಜನವನ್ನು ರಕ್ಷಿಸುವುದು ರಾಜರ ಹೊಣೆಯಾಗಿತ್ತು. ಅಷ್ಟೇ ಏಕೆ? ರಾಜನು ಕೂಡ ಸ್ವತಂತ್ರನಲ್ಲ. ಹಿಂದಿನ ಕಾಲದಿಂದ ನಡೆದುಬಂದಿರುವ ಈ ಧರ್ಮವನ್ನು ರಕ್ಷಿಸುವ, ಪಾಲಿಸುವ, ಅಧಿಕಾರಿಯಾಗಿ ಆತನು ಅದಕ್ಕೆ ಒಳಪಟ್ಟಿದ್ದನು. ಕ್ಷತ್ರಿಯನಾಗಿ ಹುಟ್ಟಿರಲಿ, ಇಲ್ಲದಿರಲಿ, ಸ್ಥಾನಬಲದಿಂದ ಅಂಥ ಕೆಲಸ ಆತನಿಗೆ ಅಗತ್ಯವಾಗಿತ್ತು. ಅದನ್ನು ಮಾಡದ ರಾಜನಿಗೆ ಧರ್ಮದ ಬೆಂಬಲ ಇರುತ್ತಿರಲಿಲ್ಲ. ಅವನು ಪತಿತನಾಗುತ್ತಿದ್ದನು. ಇಂದು ವರ್ಣಧರ್ಮ, ಆಶ್ರಮಧರ್ಮ ಇವೆರಡರ ವಿಷಯದಲ್ಲಿಯೂ ಜನರ ಶ್ರದ್ಧೆ ಚುರುಕಾಗಿಲ್ಲ. ಕಾರಣ ಏನೇ ಇರಲಿ, ಇಂದು ಹಿಂದುಗಳೆನ್ನುವವರಲ್ಲಿ ಬಹುಮಂದಿ ಬೇರೆ ಬೇರೆ ಕಾರಣಗಳಿಗಾಗಿ, ಧರ್ಮಶಾಸ್ತ್ರ, ವೇದ, ಪುರಾಣ, ಮತ್ತು ಅವು ನಿಯಮಿಸುವ ರೀತಿಗಳನ್ನು ಕುರಿತು ಅತೃಪ್ತರಾಗಿದ್ದಾರೆ. ಅವನ್ನು ಮೀರಬೇಕೆಂದೊ ರದ್ದುಮಾಡಬೇಕೆಂದೊ ಬಯಸುತ್ತಿದ್ದಾರೆ. ತಮ್ಮನ್ನು ಹಿಂದೂಗಳೆಂದು ಕರೆಯಬೇಕಾದ್ದಿಲ್ಲ ಎನ್ನುತ್ತಿದ್ದಾರೆ. ಕೆಲವು ತಕ್ಷಣದ ಲೌಕಿಕ ಸಂಗತಿಗಳೂ ಅನುಕೂಲ ಪ್ರತಿಕೂಲಗಳೂ ಈ ಪರಿಸ್ಥಿತಿಯನ್ನು ಉಂಟುಮಾಡಿವೆ. ಅಲ್ಲದ ಸಲ್ಲದ ಅಪವಾದ ಹುಟ್ಟಿವೆ. ಹಿಂದೂ ಧರ್ಮದ ಶಾಸನಗಳನ್ನು ಬದಲಾಯಿಸುವ ಪ್ರಯತ್ನಗಳು ನಡೆಯುತ್ತಿವೆ. ಇವಕ್ಕೆಲ್ಲ ಮೂಲವಾದ ಹಿಂದೂ ಧರ್ಮಸಂಪ್ರದಾಯದ ಸಾಮಾನ್ಯ ಪರಿಚಯವನ್ನು ಮಾಡಿಕೊಂಡ ಮೇಲೆ, ಸ್ಥಿತಿಯೇನು, ಬದಲಾವಣೆ ಏಕೆ ಬೇಕು, ಹೇಗೆ ಮಾರ್ಪಟ್ಟರೆ ಬದುಕು ಚೆನ್ನಾಗುತ್ತದೆ, ಬದಲಾವಣೆಯ ಹಿಂದೆ ಮನಸ್ಸೂ, ನೋಟವೂ ಹೇಗಿದ್ದರೆ ಒಳ್ಳೆಯದು, ಈ ಸಂಬಂಧದಲ್ಲಿ ಧರ್ಮಶಾಸ್ತ್ರದ ಚರಿತ್ರೆ ಏನು ಹೇಳುತ್ತದೆ, ಹಿಂದೆ ಎಂದಾದರೂ ಬದಲಾವಣೆಗಳು ಉಂಟಾಗಿದ್ದವೆ?—ಎಂಬಂಶಗಳನ್ನು ಗಮನಿಸಿ, ಗೌರವಿಸಿ ಮುಂದುವರಿಯಬೇಕು.

೨

ಧರ್ಮಶಾಸ್ತ್ರಗಳೆನ್ನುವ ಎಲ್ಲ ಗ್ರಂಥಗಳೂ ವೇದವನ್ನು ಒಪ್ಪುತ್ತ
ಎಲ್ಲಕ್ಕೂ ವೇದವೇ ಮೂಲ ಎನ್ನುತ್ತವೆ. ವೇದವೇ ಎಲ್ಲಕ್ಕಿಂತ ಮೇಲ್ಪ
ಪ್ರಮಾಣವೆನ್ನುತ್ತವೆ. ವೇದಕ್ಕೆ ಶ್ರುತಿಯೆಂದು ಇನ್ನೊಂದು ಹೆಸ
ಶ್ರುತಿಗೆ ನಾಲ್ಕು ಶಾಖೆಗಳುಂಟು ಋಕ್, ಯಜುಸ್, ಸಾಮ, ಅಥ
ಎಂಬವು ಈ ನಾಲ್ಕು ಶಾಖೆಗಳು. ಹಿಂದೂ ಎಂಬ ಹೆಸರಿನವರ
ಶ್ರೌತ ಸ್ಮಾರ್ತ ಪದ್ಧತಿಗಳನ್ನು ಅನುಸರಿಸುವವರು ಎಂಬ ಇನ್ನೊಂ
ಮಾತು ಉಂಟು. ಶ್ರೌತವೆಂದರೆ ಶ್ರುತಿ ಮಾರ್ಗ, ವೇದದ ಮಾಗ
ಸ್ಮಾರ್ತವೆಂದರೆ ಸ್ಮೃತಿ ಮಾರ್ಗ. ಧರ್ಮಶಾಸ್ತ್ರದ ಗ್ರಂಥಗಳಿಗೆ ಸ್ಮ
ಗಳೆಂದು ಹೆಸರು. ವೇದಗಳು ನಾಲ್ಕಾದರೆ, ಸ್ಮೃತಿಗಳು ಹಲ
ಈ ಸ್ಮೃತಿಗಳಲ್ಲಿ ಜನದಲ್ಲಿ ಪ್ರತಿಯೊಬ್ಬರ ಬೇರೆ ಬೇರೆ ಬಾಳಿ
ಸಂಬಂಧಿಸಿದ ವಿಚಾರಗಳಿವೆ. ಜನ ವಾಸಮಾಡುವುದು ಕುಟುಂಬಗಳ
ಕುಟುಂಬಗಳು ಕುಲಗಳಿಗೆ, ವರ್ಣಗಳಿಗೆ ಸೇರಿರುತ್ತವೆ. ಒಂದು
ಯಲ್ಲಿಯೋ ಪಟ್ಟಣದಲ್ಲಿಯೋ ನೆಲಸಿ ಜೀವನ ನಡಸುತ್ತಿರುತ್ತ
ಹಳ್ಳಿಗಳು ನಾಡಿನ ಒಂದು ಭಾಗ. ಮನೆಯಲ್ಲಿ ಹಿರಿಯರಾಗಿ ಮೇಲ್ಪ
ಒಬ್ಬರ ಮಾತೂ ಅಧಿಕಾರವೂ ನಡೆಯುವಂತೆ ಹಳ್ಳಿಯಲ್ಲಿ ಯಾರಾ
ರೊಬ್ಬರ ಅಥವಾ ಕೆಲವು ಹಿರಿಯರ ಮಾತೂ ಅಧಿಕಾರವೂ ಎಲ್ಲರಿ
ಮೇಲ್ಪಟ್ಟ ಮಾತಾಗುತ್ತದೆ. ಇಂಥವರ ಮಾತೂ ನಾಡಿನ ರಾಜ, ಮ
ರಾಜನ ಅಧಿಕಾರಿಗಳ ಮಾತಿಗೆ ಒಳಪಡಬೇಕಾಗಿರುತ್ತದೆ. ಯಾವು
ದೇಶದಲ್ಲಾಗಲಿ ಬದುಕಿನ ವ್ಯವಸ್ಥೆ ಹೀಗೇ ಸರಿ. ಒಂದು ದೇಶದ
ಇನ್ನೊಂದು ದೇಶದವರೊಡನೆ ವ್ಯಾಪಾರ, ವ್ಯವಹಾರ ಇಟ್ಟುಕೊಳ್ಳುವಾ
ಇತರ ಬಗೆಯ ಸಂಬಂಧಗಳು ಹುಟ್ಟಿಕೊಳ್ಳುವುವು. ಇವೆಲ್ಲಾ ದಿನ ದಿನ
ಲೌಕಿಕ ಜೀವನಕ್ಕೆ ಸಂಬಂಧಪಟ್ಟ ಸಂಗತಿಗಳು.

ಇದಲ್ಲದೆ ಪ್ರತಿಯೊಬ್ಬನ ಒಳ್ಳೆಯಗತಿಗೂ ಸಂಬಂಧಿಸುವಂತೆ ಇತರ ಕೆಲಸಕಾರ್ಯಗಳೂ ಹೊಣೆಗಾರಿಕೆಗಳೂ ಇರುವುವು. ಇವೆಲ್ಲ ಬಹು ಮಟ್ಟಿಗೆ ಆಯಾ ಮತಾಚಾರವನ್ನು ಅನುಸರಿಸುವುವು. ಪ್ರತಿಯೊಬ್ಬನೂ, ಪ್ರತಿದಿನವೂ ತನ್ನ ಬದುಕನ್ನು ಉತ್ತಮಗತಿಗೆ ನಡಸಬೇಕಾದರೆ ಯಾವ ಕರ್ಮಗಳನ್ನು ಮಾಡಬೇಕು ಎಂಬ ಅಂಶಗಳು ಅಲ್ಲಿ ಗೊತ್ತಾಗಿರುತ್ತವೆ. ಧರ್ಮಶಾಸ್ತ್ರಗಳಲ್ಲಿ ಈ ಎಲ್ಲ ಸಂಗತಿಗಳನ್ನೂ ಒಳಗೊಂಡ ವಿಧಿ (ಹೀಗೆಯೇ ಮಾಡತಕ್ಕದ್ದು ಎಂಬುದು), ನಿಷೇಧ (ಇಂಥ ನಡತೆ ಕೂಡದು ಎಂಬುದು), ಪ್ರಾಯಶ್ಚಿತ್ತ (ಮೀರಿದುದಕ್ಕೆ ಶಿಕ್ಷೆ ಎಂಬುದು),—ಇವು ಸ್ಪಷ್ಟವಾಗುತ್ತವೆ. ಪ್ರತಿಯೊಬ್ಬನೂ ಪ್ರತಿದಿನವೂ ಹಾಸಿಗೆಯಿಂದ ಏಳುವಾಗಿನಿಂದ ಹಿಡಿದು ತಿರುಗಿ ರಾತ್ರಿ ಮಲಗುವವರೆಗೂ, ಮಲಗಿದಾಗಲೂ ಯಾವ ರೀತಿ ನಡೆದರೆ ಅಥವಾ ನಡೆಯದಿದ್ದರೆ ಸರಿ, ಯಾವ ರೀತಿ ಸರಿಯಲ್ಲ, ಧರ್ಮಕ್ಕೆ ಒಪ್ಪಿತವಲ್ಲ ಎಂಬುದನ್ನು ಧರ್ಮಶಾಸ್ತ್ರಗಳು ತಿಳಿಸುತ್ತವೆ. ಆಪತ್ಕಾಲದಲ್ಲಿ ಹೀಗೆ ನಡೆಯಬಹುದು ಎಂಬ ಅವಕಾಶಗಳು ಪಟ್ಟಿಯಾಗಿರುತ್ತವೆ. ಪ್ರತಿಯೊಬ್ಬನ ಬದುಕಿನಲ್ಲಿಯೂ ಧರ್ಮ ನೆಲೆಗೊಂಡರೆ ಸಮಾಜದ ಬದುಕು ಭದ್ರವಾಗುವುದು, ಶುಚಿಯಾಗುವುದು, ಲೋಕದ ಸುಖ, ಶಾಂತಿ, ಕಾಂತಿ ಹೆಚ್ಚುವುದು, ಎಲ್ಲರಿಗೂ ಇಹಪರದ ಎಲ್ಲ ಸೌಖ್ಯಗಳೂ ಉಂಟಾಗುವುವು ಎಂಬುದು ಧರ್ಮಶಾಸ್ತ್ರಗಳ ಉಪದೇಶ. ಆ ಪ್ರಯೋಜನಕ್ಕೆ ಹೊಂದುವ ನೀತಿಯನ್ನು ಅವು ಗೊತ್ತಾಗಿ ಹೇಳುತ್ತವೆ.

೩

ಧರ್ಮವೆಂದರೇನು? ಅದಕ್ಕೆ ಪ್ರಮಾಣಗಳು ಯಾವುವು? ನಿಣ
ಮಾಡುವವರು ಯಾರು? ಕಷ್ಟವೋ, ಸಂದೇಹವೋ ಬಂದಾಗ ತೀರ್ಮಾ
ಹೇಗೆ? ಎಂಬ ಅಂಶಗಳು ಕೂಡ ಧರ್ಮಶಾಸ್ತ್ರಗಳಲ್ಲಿ ವಿವರವಾಗುತ
ಸಮಾಜದಲ್ಲಿರುವ ಎಲ್ಲರಿಗೂ ಲೋಕದ ಸುಖಸಾಧನ ಬೇಕು. ಸಂಪತ್ತಿ
ಬೇಕು. ಅದಕ್ಕಾಗಿ ಪ್ರತಿಯೊಬ್ಬರೂ ಬೇರೆ ಬೇರೆ ವೃತ್ತಿಗಳನ್ನು ಹಿಡಿ
ತ್ತಾರೆ. ಧರ್ಮಕ್ಕೆ ವಿರೋಧವಲ್ಲದೆ ಎಷ್ಟು ಬೇಕಾದರೂ ಹೇಗೆ ಬೆ
ದರೂ ಅವನ್ನು ಪಡೆಯಬಹುದು, ಅನುಭವಿಸಬಹುದು ಎಂಬುದು ನ
ಧರ್ಮ ಒಪ್ಪುವ ಸಂಗತಿ. ಹಾಗೆಯೇ ಅತಿಗೆ ಹೋಗದೆ, ಧರ್ಮವ
ಮೀರದೆ ಕಾಮವನ್ನು ಸಂಪಾದಿಸಿಕೊಳ್ಳಬಹುದು. ನೆರೆಯವರ ಅವೇ
ನಾದ ಬಯಕೆಗಳಿಗೂ ಕಾರ್ಯಗಳಿಗೂ ಅಡ್ಡಿಬಾರದೆ ಇದ್ದರೆ ಸರಿ. ತನ
ಅದರಿಂದ ಕೇಡಾಗದಿದ್ದರೆ ಸರಿ. ಆದುದರಿಂದಲೇ ನಮ್ಮ ದೇಶ
ಮನುಷ್ಯನ ಬದುಕೆಲ್ಲ ಅರ್ಥ, ಕಾಮ, ಧರ್ಮ ಎಂಬ ಮೂ
**ಪುರುಷಾರ್ಥ**ಗಳನ್ನು ಸಾಧಿಸುವುದರಲ್ಲಿ ತೊಡಗುತ್ತದೆ ಎನ್ನುವು
ಸಮಾಜದಲ್ಲಿ ಸಂಸಾರಿಗಳಾಗಿ ಬದುಕುವ ಎಲ್ಲರಿಗೂ ಈ ಸಾಧನೆ
ಮಿತದಲ್ಲಿ ಸಲ್ಲುವುದು. ಧರ್ಮಕ್ಕೆ ಒಳಪಟ್ಟು ಇತರ ಎರಡನ್ನೂ ಪಡೆ
ಸುಖಿಸಬಹುದು ಎಂಬ ಅವಕಾಶ ಹಿಂದೂ ಧರ್ಮ ತನ್ನ ಜನಕ್ಕೆ ಮಾಡಿರ
ದೊಡ್ಡ ಉಪಕಾರ. ಇದಕ್ಕೆ ಮೀರಿ ಪರವನ್ನು ಸಾಧಿಸುವ ಉಪಾ
ಒಂದಿದೆ. ಅದು ನಾಲ್ಕನೆಯ ಪುರುಷಾರ್ಥ: ಮೋಕ್ಷವೆಂಬುದು. ಮೋ
ವೆಂದರೆ ಬಿಡುಗಡೆ. ಎಲ್ಲ ಮೋಹಗಳಿಂದಲೂ ಅಜ್ಞಾನದಿಂದಲೂ ಸಂಸಾ
ದಿಂದಲೂ ಸಣ್ಣತನಗಳಿಂದಲೂ ಕಡೆಗೆ ಪ್ರಪಂಚದ ಸಂಪರ್ಕದಿಂದ ಕೂ
ಬಿಡುಗಡೆ. ಈ ನಾಲ್ಕು ಪುರುಷಾರ್ಥಗಳಿಗೂ ಅವುಗಳ ಸಾಧನೆಗ
ಧರ್ಮಶಾಸ್ತ್ರವು ನೇಮನಿಷ್ಠೆಗಳನ್ನು ಗೊತ್ತುಮಾಡುತ್ತದೆ. ನಿನ್ನಂ

ಇತರರೂ ; ನಿನ್ನ ಪರವಾಗಿ ಅವರು ಹೇಗೆ ನಡೆಯಬೇಕೆಂದು ನೀನು ಬಯಸುವೆಯೋ ಅದರಂತೆ ನೀನು ಅವರಲ್ಲಿ ನಡೆದುಕೊಂಡರೆ ಧರ್ಮವಾಗುವುದು ಎನ್ನುತ್ತಾರೆ. ಎಲ್ಲರೂ ಒಂದೇ ವಸ್ತು. ಆದ್ದರಿಂದ ಅವರಿಗೆ ಸಹಾಯವಾಗುವುದು ಎಂದರೆ ನಮಗೆ ನಾವೇ ಸಹಾಯಮಾಡಿಕೊಂಡಂತೆ ಎಂಬುದು ಒಂದು ಮಾತು. ಎಲ್ಲರೂ ಧರ್ಮಬಂಧುಗಳು ಎಂಬುದು ಅಂತಹ ಇನ್ನೊಂದು ಮಾತು.

'ಸಂಸ್ಕಾರ' ಎಂಬುದು ಮತ್ತೊಂದು ದೊಡ್ಡ ಮಾತು. ಸಂಸ್ಕಾರವೆಂದರೆ ಮೇಲ್ಪಾಡು, ತಿದ್ದುಪಾಡು, ಯೋಗ್ಯತೆ ಅಥವಾ ಅಧಿಕಾರ ಸಂಪಾದನೆ. ದೋಷ ಕಳೆದು ಗುಣ ಸಂಪಾದನೆ ಮಾಡಿಕೊಂಡು ಶುದ್ಧವಾಗುವುದು ಎಂಬುದು ಆ ಮಾತಿನ ಇನ್ನೊಂದು ಅರ್ಥ. ಪ್ರತಿ ದಿನವೂ ಪ್ರತಿ ಸಂಬಂಧದಲ್ಲಿಯೂ ಮನುಷ್ಯನ ಮನಸ್ಸು ಶುದ್ಧವಾಗಿ ಮೃದುವಾಗಿ ಲೋಕಹಿತಕ್ಕೆ ಸಜ್ಜಾಗಬೇಕು ಎಂಬುದು ತತ್ವ. ಗರ್ಭಾಧಾನದಿಂದ ಹಿಡಿದು ಅಂತ್ಯಕರ್ಮದವರೆಗೂ ಉಪನಯನ, ವಿವಾಹ ಮುಂತಾದ ಅನೇಕ ಸಂಸ್ಕಾರಗಳು ನಡೆಯಬೇಕೆಂದು ವಿಧಿಸಿರುವರು. ಶಿಲ್ಪಿಯ ಉಳಿಯ ಪೆಟ್ಟು ಬಿದ್ದಂತೆಲ್ಲ ಕಲ್ಲಿನಲ್ಲಿ ಮೂರ್ತಿ ಹೇಗೆ ಕಡೆದು ರೂಪುಗೊಂಡು ಚೆಲುವಾಗುವುದೋ ಹಾಗೆ ಈ ಸಂಸ್ಕಾರಗಳು ಮನುಷ್ಯನ ಜೀವವನ್ನು ರೂಪಿಸುವುವು. ಸಮಾಜದಲ್ಲಿ ಅವನಿಗೆ ಸ್ಥಾನ, ಗೌರವ ಉಂಟಾಗುವುವು.

ಯಾವ ವರ್ಣದಲ್ಲಿ ಹುಟ್ಟಿದರೂ ಸಂಸ್ಕಾರಗಳಿವೆ. ಪ್ರತಿ ಆಶ್ರಮಕ್ಕೆ ಸಂಬಂಧಿಸಿದಂತೆಯೂ ಇವೆ. ವಿವಾಹವಿಲ್ಲದೆ ಗೃಹಸ್ಥ ಆಶ್ರಮ ಶಕ್ಯವಿಲ್ಲ; ಗಂಡು ಹೆಣ್ಣು ದಾಂಪತ್ಯದಲ್ಲಿ ಬೆಳೆದು ಹಣ್ಣಾಗುವುದು ಶಕ್ಯವಿಲ್ಲ. ಆದ್ದರಿಂದಲೇ ವಿವಾಹವನ್ನು ಸಂಸ್ಕಾರವೆನ್ನುವುದು. ಮನೆಯಲ್ಲಿ ಎಳತನದಲ್ಲಿ ಇತರರೊಡನೆ ಬೆಳೆಯುವುದು, ಒಗ್ಗಿಕೊಳ್ಳುವುದು ; ಗೃಹಿಯಾದಾಗ ದಾಂಪತ್ಯ ಜೀವನದ ಸುಖ ದುಃಖಗಳಲ್ಲಿ ದಂಪತಿಗಳು ಒಬ್ಬರೊಬ್ಬರಿಗೆ ಆಗುವುದು, ತಮ್ಮ ಮಕ್ಕಳ ಲಾಲನೆ ಪಾಲನೆ, ವಿದ್ಯೆ ಯೋಗ

ಕ್ಷೇಮಗಳನ್ನು ಸಾಧಿಸುವುದು ; ಸಮಾಜದಲ್ಲಿ ಹತ್ತು ಮಂದಿಯ ಕ
ನಿಷ್ಠುರಗಳಲ್ಲಿ ಭಾಗಿಯಾಗಿ ಎಲ್ಲಕಡೆಯೂ ಸಹಾಯಕವಾಗಿ ಬಾಳುವುದು
ಈ ಎಲ್ಲ ಸನ್ನಿವೇಶಗಳಲ್ಲಿಯೂ ಮನಸ್ಸಿಗೆ ಹದ ಬರುತ್ತದೆ. ಇತರ
ಉಪಕಾರವಾಗುತ್ತದೆ, ಸಮಾಜದಲ್ಲಿ ಮನುಷ್ಯನು ವಿಕಾಸಗೊಳ್ಳುತ್ತಾ
ಧರ್ಮಶಾಸ್ತ್ರ ವಿಧಿಸುವ ಸಂಸ್ಕಾರಗಳು ಈ ಚಿತ್ತರೂಪಣೆಗೆ ಸಹಾಯ
ವಾದವು. ಹೀಗೆ ಬೆಳೆದು ವಿಶಾಲವಾದ ಮನಸ್ಸು ಲೋಕಸಂಗ್ರಹ ಮಾ
ತನ್ನ ಮನೆ, ತನ್ನ ದೇಶ, ತನ್ನ ಜನ ಎಂಬ ಮಮತೆಗಳನ್ನೂ ಸಣ್ಣ ಅ
ಮಾನಗಳನ್ನೂ ಬಿಟ್ಟು ಮೂರು ಲೋಕವೂ ತನ್ನ ದೇಶ ಎಂಬ ಸ
ದೃಷ್ಟಿಯನ್ನು ಬೆಳಸಲು ಆಗುತ್ತದೆ. ಎಲ್ಲರಲ್ಲಿಯೂ ಸಮವಾದ ನಡವಳಿ
ಶಕ್ಯವಾಗುತ್ತದೆ. ಆಗ ಬದುಕು ಪೂರ್ಣವಾಗುತ್ತದೆ. ಸಮಾಜಕ್ಕೆ ಸಹ
ಯಕವಾದ ಸೇವೆ, ಕೈಂಕರ್ಯ ಸಲ್ಲಿಸದೆ ಇದ್ದರೆ ಆತ್ಮಸಾಧನೆಯೆ
ಶಕ್ಯವಿಲ್ಲ ಎಂಬ ವರೆಗೂ ಈ ಮಾತಿನ ವಿಸ್ತಾರವಿದೆ. ಪಕ್ವವಾದ ತಿಳಿವಳಿ
ಮನಸ್ಸು, ಮಾತು, ನಡತೆ ಉಳ್ಳವನನ್ನು ಒಳ್ಳೆಯ ಸಂಸ್ಕಾರವುಳ್ಳವನ
ಎನ್ನುವರು. ಜೀವನ ಸಂಸ್ಕಾರದಿಂದ ಸಂಸ್ಕಾರಕ್ಕೆ ನಡೆಯುತ್ತದ
ಶುದ್ಧವಾಗುತ್ತದೆ. ಆದ್ದರಿಂದ ಧರ್ಮಶಾಸ್ತ್ರದಲ್ಲಿ ಸಂಸ್ಕಾರಕಾಂ
ವೊಂದು ಇರುತ್ತದೆ.

ಇದೇ ಮಟ್ಟದ ಇನ್ನೊಂದು ಸಂಗತಿಗೂ ಇಲ್ಲಿ ಅವಕಾಶವುಂಟು
ಏಕೆಂದರೆ ಇದು ಹಿಂದೂ ಜನರ ಸಂಸ್ಕೃತಿಗೆ ಸಂಬಂಧಪಟ್ಟುದು
ಮತ್ತು, ಒಂದು ಕೊನೆಯಿಲ್ಲದೆ ಬೆಳೆಯುವ, ಒಂದು ಜನವರ್ಗವನ್ನು
ಉಳಿಸುವ ಉಪಾಯ, ತಕ್ಕ ನಯಮಾರ್ಗ. ಅದು ಹಿಂದೂ ಧರ್ಮದ
ಸಾರವೆಂಬಂತೆ ಇರುವ ಋಣಗಳೆಂಬ ಮಾತು. ಋಣ ಎಂದರೆ ಸಾಲ.
ಈ ಋಣಗಳು ಮೂರು : ದೇವಋಣ, ಋಷಿಋಣ, ಪಿತೃಋಣ. ಜಗತ್ತನ್ನೆಲ್ಲ
ಉಂಟುಮಾಡಿ ಜನದ ಜೀವನಕ್ಕೆ ಬೇಕಾದ ಮಳೆ, ಬಿಸಿಲು, ಗಾಳಿ
ಮುಂತಾದ ಮಹಾ ಸಹಾಯ ಶಕ್ತಿಗಳನ್ನು ಒದಗಿಸಿ, ನೀರು, ನೆಲ,

ಬೆಟ್ಟ, ಚಂದ್ರ, ಸೂರ್ಯ, ತಾರೆ, ಗಿಡ, ಹಕ್ಕಿ, ಪ್ರಾಣಿ ಈ ಎಲ್ಲ ಬಗೆಯ ಸೌಭಾಗ್ಯವನ್ನೂ ಒದಗಿಸಿ ಲೋಕ ಜೀವನವನ್ನು ನಡಸಿ ಕಾಪಾಡು ವವರು ದೇವತೆಗಳು. ಅಂಥವರಿಗೆ ಪೂಜೆ, ಭಕ್ತಿ ಸಲ್ಲಿಸಬೇಕು. ಅದಕ್ಕೆ ಯಜ್ಞ, ಯಾಗ, ತರ್ಪಣಾದಿಗಳೇ ದಾರಿ.—ಆಯಾ ಜನವರ್ಗದವರು ಅವರಿಗೆ ಗೊತ್ತಾಗಿರುವ ವಿಧಾನದಲ್ಲಿ ಈ ಋಣವನ್ನು ತೀರಿಸತಕ್ಕದ್ದು—ಎಂದು ಶಾಸ್ತ್ರಗಳಲ್ಲಿ ಹೇಳಿದೆ. ಈ ದೇಶದ ಎಲ್ಲ ವಿದ್ಯೆ ಹುಟ್ಟಿ ಬೆಳೆಯು ವುದಕ್ಕೂ ಹರಡುವುದಕ್ಕೂ ಎಲ್ಲ ಕಲೆ, ಶಾಸ್ತ್ರ, ನೀತಿ, ನಿಯಮ, ಸಂಪ್ರದಾಯಗಳು ನಯವಾಗುವುದಕ್ಕೂ ಹಿಂದಿನ ಋಷಿಗಳು ಕಾರಣ. ಬದುಕಿನಲ್ಲಿ ಯಾವುದು ಮುಖ್ಯ, ಯಾವುದಲ್ಲ; ಯಾವುದು ಪುಣ್ಯ, ಪಾಪ; ಯಾವುದು ಹಿತ, ಏಳಿಗೆಯ ದಾರಿ; ಯಾವ ನಡೆನುಡಿ ಸಂಬಂಧ ಗಳಿಂದ ಮನುಷ್ಯನ ಲೋಕದ ಬದುಕು ಗಟ್ಟಿಯಾಗುತ್ತದೆ, ಎಲ್ಲ ಬಗೆ ಯಿಂದಲೂ ಶ್ರೇಯಸ್ಸನ್ನು ಪಡೆಯಬಲ್ಲದ್ದಾಗುತ್ತದೆ ಎಂಬ ತಿಳಿವಳಿಕೆ ಯನ್ನು ಉಂಟುಮಾಡಿರುವವರು ಋಷಿಗಳು. ಅವರ ಸಾಲವನ್ನು ಹರಿಸು ವುದು ಪ್ರತಿಯೊಬ್ಬರ ಕರ್ತವ್ಯ. ಅವರನ್ನು ತಿಳಿದು ಅವರಿಂದ ಬಂದುದಕ್ಕೆ ತಮ್ಮದಾಗಿ ಶುಚಿ ವಿದ್ಯೆಗಳನ್ನು ಸೇರಿಸಿ ಬೆಳಸತಕ್ಕದ್ದು. ಎಂದರೆ ಮೊದಲು ಅದನ್ನು ಅರಿಯುವುದು, ಅರಿತುದನ್ನು ಇತರರಿಗೆ ತಿಳಿಸುವುದು, ಹೊಸದಾಗಿ ಸೇರಿಸಿ ಪುಷ್ಟಿಗೊಳಿಸುವುದು—ಈ ರೀತಿ ಜ್ಞಾನ ಭಂಡಾರ ವನ್ನೂ ಶಾಸ್ತ್ರವನ್ನೂ ಬೆಳಸುವ ಕಾರ್ಯ ಈ ಋಣಕ್ಕೆ ಸಂಬಂಧಿಸಿದುದು. ಇದೂ ಅಗತ್ಯಕರ್ಮ. ಪಿತೃಋಣವೆಂದರೆ ನಮಗೆ ದೇಹವಿತ್ತ ತಂದೆ ತಾಯಿಗಳ ಸಾಲ; ಅವರ ಸೇವೆ, ಅವರಿಗೆ ಸಲ್ಲಿಸುವ ಪೂಜೆ, ಗೌರವ, ಉಪಚಾರ. ಅವರು ನಮಗೆ ರೋಗವಿಲ್ಲದ ದೃಢವಾದ ದೇಹವನ್ನು ಕೊಡುತ್ತಾರೆ. ಆದ್ದರಿಂದಲೇ ಲೋಕದಲ್ಲಿ ನಾವು ಜೀವಿಸುವುದು? ಚೆಲು ವಾದ ಈ ಲೋಕದ ಎಲ್ಲ ಸೌಭಾಗ್ಯಗಳನ್ನು ಕಾಣಲೂ, ಪಡೆಯಲೂ ಶಕ್ಯವಾಗಿರುವುದು? ಈ ದೊಡ್ಡ ಬದುಕಿನ ಆಸೆ ಭರವಸೆಗಳಲ್ಲಿ ಸಮಾ

ರಂಭಗಳಲ್ಲಿ ನಮ್ಮ ಅಂಶವನ್ನು ಸೇರಿಸಬೇಕೆಂಬ ಆತುರ ಉಂಟಾಗಿ
ವುದು? ಅವರಿಲ್ಲದಿದ್ದರೆ ನಾವೆಲ್ಲಿ? ಅವರು ತಮ್ಮವರೆಗೂ ಬಂದ ವಂಶ
ರಕ್ತವನ್ನೂ ವೀರ್ಯವನ್ನೂ ಆರೋಗ್ಯವನ್ನೂ ನಮಗೆ ಎರೆದಿದ್ದಾ
ನಮಗೆ ಒಂದು ರೂಪು ಕೊಟ್ಟಿದ್ದಾರೆ. ಆ ಸಂತತಿ ಬೆಳೆಯಬೇಕು. ಅ
ನಮ್ಮೊಂದಿಗೇ ಮುಗಿದು ಹೋಗಬಾರದು. ಅವರ ವಂಶಕ್ಕೆ ಸಂಬಂಧಿಸಿ
ಈ ಎಳೆ ಕಡಿಯದೆ ಮುಂದಕ್ಕೂ ನಡೆಯುವಂತೆ ನಮಗೆ ತರುವಾ
ಉಳಿಯುವ ನಮ್ಮ ಮಕ್ಕಳನ್ನು ಸಂತತಿಗೆ ಸೇರಿಸಬೇಕು. ಇದು ಪಿತ
ಗಳಿಗೆ ಸಲ್ಲಬೇಕಾದ ಋಣ. ಹೀಗೆ ದೇಹವಿತ್ತವರಿಗೆ, ಬುದ್ಧಿಯಿತ್ತವರಿಗೆ
ಲೋಕದ ಪಾಲಕರಿಗೆ ಮರೆಯದೆ ಭಕ್ತಿ ಸಲ್ಲಿಸಬೇಕೆಂಬ ಭಾರ ಪ್ರತಿಯೊಬ್ಬ
ಹಿಂದುವಿನ ಮೇಲೆಯೂ ಬಿದ್ದದು.

ನಮ್ಮ ಧರ್ಮದಲ್ಲಿ—ಹಕ್ಕುಗಳನ್ನು ಪಡೆದು ಅವಕ್ಕಾಗಿ ಹೊಡೆದಾಡ
ಬೇಕು ಎಂಬುದಕ್ಕಿಂತ ನಾವು ಸಲ್ಲಿಸಬೇಕಾದ ಸೇವೆಗಳನ್ನು ಸಲ್ಲಿಸಿ,
ಕರ್ತವ್ಯವನ್ನು ನಡಸಬೇಕು ಎಂಬ ಅಂಶ ಹೆಚ್ಚು ಮುಖ್ಯವಾದುದು.
ಇದನ್ನು ಸರಿಯಾಗಿ ಅರಿತೋ, ಅರಿಯದೆಯೋ ಈ ನಾಡಿನಲ್ಲಿ ಅನೇಕ
ಬಗೆಯ ಜಡತೆಯೂ ಅಪಾರ್ಥವೂ ಉಂಟಾಗಿವೆ. ಇನ್ನೊಬ್ಬರಿಂದ ಕೇಳಿ
ತಮಗಾಗಿ ತೆಗೆದುಕೊಳ್ಳುವುದಕ್ಕಿಂತ ಇನ್ನೊಬ್ಬರಿಗೆ ಕೊಡುವೆವೆನ್ನುವ
ದಾರಿ ಹಿರಿದಾದುದು. ತಮಗೆ ಬೇಕು ನಿಜ. ತೆಗೆದುಕೊಂಡುದನ್ನು ತಮ
ಗಾಗಿಯೇ ಉಳಿಸಿಕೊಳ್ಳಬಾರದು. ಹೆರವರಿಗಾಗಿ ಪಡೆದು ಅದನ್ನು ವಿನಿ
ಯೋಗಮಾಡಬೇಕು ಎಂಬ ಬಗೆ ಉದಾರವಾದುದು. ದಾನಕೊಳ್ಳುವುದ
ಕ್ಕಿಂತ ದಾನಕೊಡುವುದು ದೊಡ್ಡ ಧರ್ಮ. ಆದ್ದರಿಂದ ದಾನಮಾಡುವ
ಸಂಪತ್ತಿ ಪಡೆದುಕೊಳ್ಳಬೇಕು. ಇತರರಿಗೆ ನೆರವಾಗುವ ಶಕ್ತಿ, ಸಾಮರ್ಥ್ಯ
ಗಳಿಸಬೇಕು. ದಾನದ, ತ್ಯಾಗದ ಮನಸ್ಸು ಬೆಳಸಬೇಕು. ದೇವರ ನೆಲೆ
ಈ ಜಗತ್ತೆಲ್ಲ; ಅದಿಲ್ಲದ ಒಂದು ಚೂರೂ ಇಲ್ಲ. ಆದ್ದರಿಂದ ತ್ಯಾಗ
ಮಾಡಿ ಸುಖಿಸಿ. ಆಶೆ ಬೇಡ—ಎಂಬುದು ಹಿರಿಯಮಂತ್ರ. ಕೊಟ್ಟು

ಸುಖಿಸಬೇಕು ಎಂಬ ನೀತಿಯ ಅಡಿಯಲ್ಲಿ ಶಕ್ತಿಯೂ ಇದೆ, ಪುಷ್ಟಿಯೂ ಇದೆ, ಧರ್ಮವೂ ಇದೆ. ಇದು ಜೀವನವನ್ನು ಜಡವಾಗಿ ಮಾಡಬೇಕಾಗಿಲ್ಲ. ಹಿಂದೆ ಮಾಡಲಿಲ್ಲ. ನೂರು ವರ್ಷ ಇನ್ನೊಬ್ಬರು ನಮ್ಮನ್ನು ಸೋಲಿಸದಂತೆ ಬಾಳೋಣ ಎಂಬ ಹಾರೈಕೆ ಈ ಧರ್ಮದ ಅಡಿಯಲ್ಲಿದೆ. ಈ ಋಣ ತತ್ವವೂ ಧರ್ಮಶಾಸ್ತ್ರದಲ್ಲಿ ಬೇರೆಯಾಗಿ ವರ್ಣನೆಗೊಂಡಿದೆ.

೪

ಧರ್ಮ ಎಂಬ ಮಾತಿನ ಅರ್ಥ.—ಯಾವುದು ಎಲ್ಲವನ್ನೂ ಹಿಡಿದಿದೆಯೋ, ನಿಲಿಸಿದೆಯೋ, ಪೋಷಿಸುತ್ತದೆಯೋ, ಅದು ಧರ್ಮ. ಧರ್ಮವೆಂದರೆ ಪದಾರ್ಥದ ಸ್ವರೂಪ, ಸ್ವಭಾವಗುಣ; ಧರ್ಮವೆಂದರೆ ಆಚಾರ, ಪುಣ್ಯ, ದಾನ, ಮತವೆಲ್ಲದವರ ಸಂದೇಶ, ಎಂದು ಮುಂತಾಗಿ ಅನೇಕ ರೀತಿಯಲ್ಲಿ ಧರ್ಮಪದಕ್ಕೆ ಅರ್ಥ ಹೇಳಿದ್ದಾರೆ. ಆ ವರ್ಣನೆಗಳಲ್ಲಿ ಕೆಲವು ಅದರ ಸಾರವನ್ನು ತಿಳಿಸುವುವು. ಒಂದೋ ಎರಡೋ ಲಕ್ಷಣಗಳನ್ನು ಹೇಳುವವು ಕೆಲವು, ಅದರ ಕಾರ್ಯವನ್ನೂ ಪ್ರಯೋಜನವನ್ನೂ ತಿಳಿಸುವವು ಕೆಲವು. ಈ ಎಲ್ಲವೂ ಆ ಮಾತಿನ ಅರ್ಥದಲ್ಲಿ ಅಡಕವಾಗುತ್ತವೆ. ಧರ್ಮಶಾಸ್ತ್ರಗಳಲ್ಲಿ ಬಹು ಮಟ್ಟಿಗೆ ಈ ಸಂಗತಿಗಳಿವೆ: ಹಿಂದೂ ಅಥವಾ ಆರ್ಯಪಂಗಡದ ಜನರು ಪಡೆದಿರುವ ಅಧಿಕಾರ, ಕರ್ತವ್ಯ, ಹೊಣೆಗಾರಿಕೆ ಯಾವುವು? ಈ ಜನವರ್ಗದ ಅಂಗವಾದ ಅವರು ಯಾವ ರೀತಿ ನಡೆದರೆ ನಡತೆ ಸರಿಯಾಗುತ್ತದೆ? ಆಯಾ ವರ್ಣಕ್ಕೆ ಸಂಬಂಧಿಸಿದಂತೆ ಅವರು ಹೇಗೆ ನಡೆದುಕೊಳ್ಳಬೇಕು? ಯಾವ ಆಶ್ರಮದಲ್ಲಿ ಇದ್ದಾರೆಯೋ ಅದಕ್ಕೆ ಸಂಬಂಧಿಸಿದಂತೆ ಅವರ ನಡೆವಳಿಕೆ ಹೇಗೆ?—ಮುಂತಾದವು.

ಎಲ್ಲ ಧರ್ಮಸೂತ್ರಗಳೂ ವರ್ಣ ಧರ್ಮ, ಆಶ್ರಮ ಧರ್ಮಗಳನ್ನೇ ಉಪದೇಶಿಸುತ್ತವೆಯೆನ್ನಬಹುದು. ಇವು, ಐದು ತೆರ: (೧) ವರ್ಣಧರ್ಮ, (೨) ಆಶ್ರಮಧರ್ಮ, (೩) ವರ್ಣಾಶ್ರಮಧರ್ಮ; (೪) ನೈಮಿತ್ತಿಕ ಧರ್ಮ,

(೫) ಗುಣಧರ್ಮ. ನೈಮಿತ್ತಿಕ ಎಂದರೆ ಪ್ರಾಯಶ್ಚಿತ್ತ ಮುಂತಾದು
ಗುಣಧರ್ಮವೆಂದರೆ ಅವರವರ ಸ್ಥಾನಕ್ಕೆ ತಕ್ಕ ಕಾರ್ಯಗಳು. ರಾ
ಸೈನಿಕ, ಪುರೋಹಿತ, ಮುಂತಾದವರು ತಮ್ಮ ಸ್ಥಾನಕ್ಕೆ ಸಂಬಂಧಿಸಿದ
ನಡಸಬೇಕಾದ ಧರ್ಮ. ಅನೇಕ ವಿವರಾಂಶಗಳು ಇಲ್ಲಿಗೆ ಸಂಬ
ಪಟ್ಟರೂ ಆಚಾರವೆಂಬ ನ್ಯಾಯಶಾಸನ, ನೀತಿಯ ಭಾಗ ಒಂದು ಕಡೆಯ
ವ್ಯವಹಾರವೆಂಬ ನ್ಯಾಯ ವಿವೇಚನೆ, ನ್ಯಾಯ ನಿರ್ಣಯದ ಅ
ಇನ್ನೊಂದು ಕಡೆಯೂ, ವಿಶೇಷವಾಗಿ ವಿವರಣೆಯಾಗುತ್ತವೆ. ಸಾಮಾ
ಧರ್ಮವೆಂಬ ಇನ್ನೊಂದನ್ನು ಎಲ್ಲರಿಗೂ ಅನ್ವಯಿಸುವ ಹಾಗೆ ಹೇಳ
ಗ್ರಂಥಗಳೂ ಕೆಲವುಂಟು. ಆರ್ಥಿಕ ಜೀವನದ ಮತ್ತು ರಾಜಕೀ
ಜೀವನದ ಅಂಶಗಳೆಲ್ಲ ಹಲವು ವೇಳೆ ವಿವರವಾಗುವುವು. ಈ ಧರ
ಶಾಸ್ತ್ರಗಳ ಜೊತೆಗೆ ಒಂದು ಕಡೆ ಅರ್ಥಶಾಸ್ತ್ರ ಸೇರುತ್ತದೆ. ಇನ್ನೊಂ
ಕಡೆ ರಾಜನೀತಿ ಅಥವಾ ದಂಡನೀತಿ ಸೇರುತ್ತದೆ. ಅರ್ಥ ಎಂದ
ಉಪಾಯ, ಮಾರ್ಗ, ಸಾಧನ. ಯಾವ ಶಕ್ತಿ ಸಂಪತ್ತುಗಳನ್ನು ಪಡೆದ
ಬಯಸಿದುದೆಲ್ಲವನ್ನೂ ಪಡೆಯಬಹುದೋ ಅದು ಅರ್ಥ. ದಂಡ ಎಂದ
ಶಿಕ್ಷಿಸುವ ರಕ್ಷಿಸುವ ರಾಜಶಕ್ತಿ. ಕೆಲವರು ಕಾಮಸೂತ್ರಗಳೂ ಈ ಪ್ರಪಂಚ
ಸಂಬಂಧಿಸಿವೆಯೆಂದು ಹೇಳುತ್ತಾರೆ. ಎಂದರೆ ಪುರುಷಾರ್ಥಗಳ ಸಾಧ
ಯಲ್ಲಿ ತೊಡಗಿರುವ ಮನುಷ್ಯನ ಯಾವ ಯಾವ ಎಲ್ಲ ವ್ಯಾಪಾರಗ
ಬೆಳೆಯುವುವೋ ಅವೆಲ್ಲಕ್ಕೂ ಸಂಬಂಧಿಸಿದ ಶಾಸನ ಧರ್ಮಶಾಸ್ತ್ರದ
ವಿಚಾರವಾಗುತ್ತದೆ. ಶಸ್, ಶಾಸ್ ಎಂದರೆ ವಿಧಿಸುವುದು ಎಂದರ್ಥ
ಈ ಎಲ್ಲ ಅಂಶಗಳಲ್ಲಿಯೂ ಹಿಂದೂಧರ್ಮದ ಪ್ರಕಾರ ಯಾವ ಬಗೆ
ಶಾಸನವಿದೆ ಎಂಬುದು ಹಿಂದೂಧರ್ಮಶಾಸ್ತ್ರದ ಪ್ರಪಂಚ.

ಧರ್ಮಕ್ಕೆ ಮೂಲ ಯಾವುದು? ಪ್ರಮಾಣಗಳು ಯಾವುವು? ಇವುಗಳ
ಯಾವುದಕ್ಕೆ ಎಲ್ಲಕ್ಕಿಂತ ಹೆಚ್ಚಿನ ಗೌರವ? ಸಂದೇಹ ಉಂಟಾದ
ಹೋಗಲಾಡಿಸುವುದು ಹೇಗೆ? ಎಂಬುದನ್ನು ಸಾಮಾನ್ಯವಾಗಿ ಈ ಶಾಸ

ಗ್ರಂಥಗಳಲ್ಲಿ ಹೇಳುತ್ತಾರೆ. ಧರ್ಮಕ್ಕೆ ವೇದವೇ ಮೂಲ. ಶಾಸ್ತ್ರಗಳಿಗೆ ತಕ್ಕಂತೆ ಜೊತೆಗೆ ನಡೆಯುವವರ ನಡತೆ ಸೇರುತ್ತದೆ ಎಂಬುದು ಬಹು ಹಿಂದಿನ ಕಾಲದಿಂದ ಬಂದಿರುವ ಮಾತು. ಧರ್ಮವನ್ನೂ ವೇದವನ್ನೂ ತಿಳಿದವರು ಒಟ್ಟಿಗೆ ಏನು ಹೇಳುತ್ತಾರೋ ಅದು ಧರ್ಮಕ್ಕೆ ಪ್ರಮಾಣ ಎನ್ನು ವುದು ಇನ್ನೊಂದು ಮಾತು. ಶ್ರುತಿ, ಸ್ಮೃತಿ, ಸದಾಚಾರ, ತನ್ನ ಮನ ಸ್ಸಿಗೂ ಆತ್ಮಕ್ಕೂ ತುಷ್ಟಿ ತರುವಂಥದು—ಇವು ನಾಲ್ಕು ಧರ್ಮಕ್ಕೆ ಮೂಲವೆಂದು ಒಂದು ಸ್ಮೃತಿ ಹೇಳುತ್ತದೆ. ಸದಾಚಾರ, ಶಿಷ್ಟಾಚಾರ ವೆಂದರೆ ಹಿರಿಯರಾದ ಸಜ್ಜನರ ನಡತೆ; ಸ್ವಂತ ತುಷ್ಟಿಗೆ ಅಥವಾ ತನ್ನ ಆತ್ಮಕ್ಕೆ ಪ್ರಿಯವಾದುದು ಎಂದರೆ ಧರ್ಮಿಷ್ಠರಾದವರ ಮನಸ್ಸಿಗೆ ಯಾವುದು ಸರಿ ಎಂದು ತೋರಿ, ತೃಪ್ತಿ ಉಂಟುಮಾಡುತ್ತದೆಯೋ ಅದು. ಎಲ್ಲಕ್ಕಿಂತ ಮೇಲಿನ ಪ್ರಮಾಣ ವೇದದ್ದು. ವೇದಕ್ಕೂ ಸ್ಮೃತಿಗಳಿಗೂ ಯಾವುದು ವಿಹಿತವೋ ಅದು ಧರ್ಮವಾಗುತ್ತದೆ. ಆ ಮೂಲಕ ಧರ್ಮದ ಸಂಪಾದನೆ ಶಕ್ಯವಾಗದೆ ಹೋದರೆ ಅಥವಾ, ಎಲ್ಲಿ ಇವುಗಳ ಪ್ರಮಾಣ ವನ್ನು ಪಡೆಯುವುದಕ್ಕಾಗುವುದಿಲ್ಲವೋ ಅಲ್ಲಿ, ಶಿಷ್ಟಾಚಾರವು, ಕುಲದ ಹಿರಿಯರ ಅಥವಾ ಸಾಧುಸಜ್ಜನರ ಅಥವಾ ಮಹಾ ಜನರ ನಡತೆ, ಮಾತು—ಪ್ರಮಾಣವಾಗುತ್ತದೆ. ಪಕ್ಷಪಾತ, ಅಸೂಯೆ, ದ್ವೇಷ, ಸ್ವಂತ ಲಾಭದ ಆಸೆ ಇಲ್ಲದವರು ಶಿಷ್ಟರು, ತಿಳಿದವರು. ಇಂಥವರ ನಡತೆಯಿಂದ ಎಲ್ಲ ಸಂದೇಹಗಳನ್ನೂ ಹೋಗಲಾಡಿಸಿಕೊಳ್ಳಬೇಕು. ನಡತೆಯನ್ನು ತಿದ್ದಿ ಕೊಳ್ಳಬೇಕು. ಸ್ವಂತ ಜೀವನದಲ್ಲಿ ಯಾರ ಬಾಳು ಶುಚಿಯೋ, ಯಾರ ನಡತೆ ಹಿಂಸೆ ಇಲ್ಲದುದೋ, ಮನಸ್ಸು ಉದಾರವೋ, ಅಂಥವರ ನಡತೆ ಸುತ್ತಲಿನ ಜನಕ್ಕೆ ಮಾದರಿಯಾಗಬೇಕು. ಆದುದರಿಂದಲೇ ಧರ್ಮಶಾಸ್ತ್ರ ಗ್ರಂಥಗಳಲ್ಲಿ ಇತರ ಪ್ರಮಾಣಗಳನ್ನು ವರ್ಣಿಸುವುದರ ಜೊತೆಗೆ ಶಿಷ್ಟ ರೆಂದರೆ ಯಾರು ಎಂಬುದನ್ನೂ ತಿಳಿಸುತ್ತಾರೆ. ವಿಶೇಷ ಸಮಯಗಳಲ್ಲಿ ಧರ್ಮವನ್ನು ನಿರ್ಣಯಿಸುವ ಅಧಿಕಾರ ಉಳ್ಳವರು ಯಾರು ಎಂಬಾಗ

ಪರಿಷತ್ ಎಂಬ ಸಭೆಯನ್ನೂ ಆ ಸಭಿಕರ ಗುಣ ಯೋಗ್ಯತೆಗಳನ
ವರ್ಣಿಸುತ್ತಾರೆ. ಕಡೆಯದಾದ ಸ್ವಂತತುಷ್ಟಿ ಅಥವಾ ಪ್ರಿಯ ಎ
ಮಾತು ಬಹು ದೊಡ್ಡ ಅಂಶ; ಹಾಗೆಯೇ ಅಂಥವರ ಮೇಲೆ ದೊ
ಹೊಣೆ ಹೊರಿಸುವ ಅಂಶ.

ಒಂದು ಕಡೆ ಎಲ್ಲಕ್ಕೂ ಮೇಲಧಿಕಾರ ವೇದಕ್ಕೆ ಎಂದಾದರೆ ಇನ್ನೊಂ
ಕಡೆ ಈ ಕ್ರಮವನ್ನು ಅನುಸರಿಸಿ, ಒಂದಕ್ಕೆ ಇನ್ನೊಂದು ಸೇರಿ ಪ್ರಮಾಣ
ಬಲಪಡುತ್ತದೆ. ನಾಲ್ಕೂ ಹೊಂದುವಾಗ ಧರ್ಮ ಉತ್ತಮವಾಗುವು
ಯಾವುದೇ ಕಾರಣದಿಂದಾಗಲಿ ಇವುಗಳಲ್ಲಿ ಒಂದೊಂದಕ್ಕೆ ವಿರೋ
ಉಂಟಾದರೆ ವೇದದ ಅರ್ಥವನ್ನು ಸ್ಮೃತಿ ಸ್ಪಷ್ಟಪಡಿಸುತ್ತದೆ. ಇವೆರಡ
ಹೃದಯವೂ ದಾರಿಯೂ ಇಂಥವೆಂಬುದನ್ನು ಶಿಷ್ಟಾಚಾರ (ಸದಾಚಾ
ನಡೆದು ತೋರಿಸುತ್ತದೆ. ಯಾವುದಾದರೂ ಒಂದು ಕಡೆ ಅಥವಾ ಒಂ
ಕಾಲದಲ್ಲಿ ಅಥವಾ ಒಂದು ವಿಶೇಷ ಸಂದರ್ಭದಲ್ಲಿ ಇವೆಲ್ಲವುಗಳ ನಿರ್ಣ
ಸರಿಯಲ್ಲವೆಂದು ತೋರಿದರೆ ಅಂತಹ ಸಂದರ್ಭದಲ್ಲಿ ಆತ್ಮನಸ್‌ತುಷ್ಟಿ
ಹೆಚ್ಚಿನ ಗೌರವ, ಅಗತ್ಯ ಬರುತ್ತದೆ. ಅಂತಃಕರಣ ಪ್ರವೃತ್ತಿ ಎಂ
ಕೂಡ ಇದನ್ನು ವರ್ಣಿಸಿರುವುದುಂಟು. ಯಾವಾಗ? ಯಾರ ಆ
ತುಷ್ಟಿ? ಯಾರ ಪ್ರಿಯ? ಏಕೆ? ಏನು ಪ್ರಯೋಜನವನ್ನು ಸಾಧಿ
ವುದಕ್ಕಾಗಿ? ಎಂಬುದನ್ನು ಮಾತ್ರ ಚೆನ್ನಾಗಿ ತಿಳಿಯಬೇಕು. ಇತ
ಪ್ರಮಾಣವನ್ನೂ ಸುತ್ತಮುತ್ತಲಿನ ಆಚಾರವನ್ನೂ ಚೆನ್ನಾಗಿ ಅರಿ
ಅವುಗಳಿಗೆ ಸಾಮಾನ್ಯವಾಗಿ ಮರ್ಯಾದೆ ಕೊಡುವ ಬುದ್ಧಿಯುಳ್ಳ ಮನು
ನಿಗೇ ಇದು ಒಪ್ಪುವುದು. ಒಂದು ಉಪನಿಷತ್ತು ಹೇಳಿರುವಂತೆ—ಅಂಥವ
ಸ್ವಭಾವದಲ್ಲಿ ನಯವಿರಬೇಕು, ಮೃದುವಿರಬೇಕು; ಕಠಿಣತೆ ಇರಬಾರದ
ಆತನು ಧರ್ಮವನ್ನು ಬಯಸುವವನೂ ಸಾಧಿಸುವವನೂ ಆಗಿರಬೇಕ
ಇತರ ಪ್ರಮಾಣಗಳನ್ನು ಹಿಡಿದರೆ ಕ್ರೌರ್ಯವಾದೀತು ಎಂದು ತಿಳಿದವ
ಆತನು. ಮಾನವ ಕರುಣೆಯನ್ನೂ ಹಿತವನ್ನೂ ಮನಸ್ಸಿನಲ್ಲಿಟ್ಟುಕೊಂ

ಸಾಮಾನ್ಯವಾಗಿ ಧರ್ಮಕ್ಕೆ ಹೆದರತಕ್ಕವನು ಮಾತ್ರ ವಿಶೇಷ ಸಂದರ್ಭಗಳಲ್ಲಿ ಅವನ್ನು ಮೀರಬಹುದು ; ತನ್ನ ಮನಸ್ಸೂ, ಅಂತಃಕರಣವೂ ತೃಪ್ತಿಪಡುವಂತೆ ನಡೆಯಬಹುದು—ಎಂಬ ಅಂಶ ಇಲ್ಲಿ ಚೆನ್ನಾಗಿ ಗೊತ್ತಾಗುತ್ತದೆ. ಎಂದರೆ ಯಾರು ಧರ್ಮವನ್ನು ನಡಸಬೇಕೋ ಅಂಥವರಿಗೆ ಈ ಎಲ್ಲ ಪ್ರಮಾಣಗಳ ಗುಣವೂ ಬೆಲೆಯೂ ಗೊತ್ತಿರಬೇಕು. ಲಾಭ ಬರಲಿ, ನಷ್ಟ ಉಂಟಾಗಲಿ, ಸ್ವಂತಕ್ಕೆ ಸುಖವಾಗಲಿ, ಆಗದಿರಲಿ ಅವನ್ನು ಲಕ್ಷಿಸದೆ ನಡಸಬಲ್ಲವರು ಮಾತ್ರ ಧರ್ಮವನ್ನು ತಿಳಿದ ಶಿಷ್ಟರು ; ಇಂಥವರದು ಸರಿಯಾದ ತೀರ್ಮಾನವಾಗಬಲ್ಲದು.

ಧರ್ಮ ತಿಳಿಸುವ ಗ್ರಂಥಗಳನ್ನು ಆರ್ಷೇಯ ಎನ್ನುವುದುಂಟು. ಎಂದರೆ ಅವು ಋಷಿಗಳಿಂದ, ಋಷಿಗಳ ಕಾಲದಿಂದ ಬಂದವು ಎಂದರ್ಥ. ಧರ್ಮಕ್ಕೆ ಮೂಲ ವೇದವೆಂದು ಹೇಳಿತಲ್ಲವೆ? ಮುಂಧಿನ ಕಾಲದಲ್ಲಿ ಯಾವುದನ್ನು ಧರ್ಮಶಾಸ್ತ್ರ ಗ್ರಂಥಗಳು ಎನ್ನುತ್ತಾರೊ ಅವುಗಳಲ್ಲಿ ಇರುವಂತೆ ಒಂದು ಕ್ರಮದಲ್ಲಿ ಸಂಗತಿಗಳನ್ನು ವಿವರಿಸುವ ವಿಧಾನ ವೇದಗಳಲ್ಲಿ ಇಲ್ಲ. ಇತರ ಅನೇಕ ಸಂಗತಿಗಳನ್ನು ತಿಳಿಸುವ ನಡುವೆ ಹುಟ್ಟು, ಸಾವು, ಮದುವೆ, ಜನಸಂಬಂಧ, ಗಂಡು ಹೆಣ್ಣಿಗೆ, ಒಡೆಯ ಸೇವಕರಿಗೆ ಇರಬೇಕಾದ ಬಾಂಧವ್ಯ ; ಯಾವುದು ಪಾಪ, ಯಾವುದು ಪುಣ್ಯ ಎಂಬ ವಿಚಾರ ; ಮಕ್ಕಳು ಎಷ್ಟು ತೆರ ಎಂಬ ವಿಚಾರ ; ಆಸ್ತಿಯ ಹಕ್ಕು ಯಾರು ಯಾರಿಗೆ ಹೇಗೆ ಎಂಬ ವಿಚಾರ ; ಹೆಂಗಸಿನ ಹಕ್ಕು, ಸ್ಥಾನ, ಮಾನ ಎಂಥವು ಎಂಬುದು ; ಜನವರ್ಗದಲ್ಲಿ ಯಾವ ಯಾವ ಬಗೆಯವರಿಗೆ ಯಾವ ಯಾವ ಬಗೆಯ ಅಧಿಕಾರವುಂಟು, ಹೊಣೆಗಾರಿಕೆ ಏನು ಎಂಬುದು ; ಪುಣ್ಯಕಾರ್ಯಗಳು, ಯಜ್ಞಯಾಗಾದಿಗಳು, ಮುಂತಾದುವನ್ನು ವರ್ಣಿಸುವ ಮಾತುಗಳು—ವೇದದಲ್ಲಿ ಅಲ್ಲಿ, ಇಲ್ಲಿ ಬರುತ್ತವೆ. ಅವು ಆ ಕಾಲದ ಜನರ ನಡವಳಿಕೆಯನ್ನೂ ಬದುಕಿನ ನಂಬಿಕೆಗಳನ್ನೂ ತೋರಿಸುತ್ತವೆ. ಅವರು ಯಾವುದನ್ನು ಒಪ್ಪುತ್ತಿದ್ದರು, ಮೆಚ್ಚುತ್ತಿದ್ದರು, ಯಾವುದನ್ನು

ಸರಿಯಲ್ಲವೆನ್ನುತ್ತಿದ್ದರು ಎಂಬುದನ್ನು ತಿಳಿಸುತ್ತವೆ. ಎಂದರೆ ಧವ
ಕೆಲವು ಪ್ರಕಾರಗಳನ್ನೂ ಜೀವನದ ಒಂದು ಚಿತ್ರವನ್ನೂ ನಾವು
ಸಂಗ್ರಹಿಸಬಹುದು. ಅಷ್ಟೇ ಹೊರತು ಯಾವುದನ್ನೂ ಒಂದು ಗೊತ
ಕ್ರಮದಲ್ಲಿ ವಿವರಿಸುವ ಶಾಸ್ತ್ರಗಳಲ್ಲ, ವೇದಗಳು.

೫

ಈ ಶಾಸ್ತ್ರ ಗ್ರಂಥಗಳು ಸುಮಾರು ಮೂರು—ನಾಲ್ಕು ಬಗೆಯಾ
ಎಲ್ಲ ಗ್ರಂಥಗಳ ಕಾಲವನ್ನೂ ಹೀಗೆಯೆ ಸರಿ ಎಂದು ನಿರ್ಧರಿಸುವು
ಆಗುವುದಿಲ್ಲ. ಯಾವುದು ಮೊದಲು? ಯಾವುದು ಈಚಿನದು? ಎ
ಈಚಿನದು? ಎಂದು ಹೇಳುವುದು ಕೂಡ ಕೆಲವು ಸಂದರ್ಭಗಳಲ್ಲಿ ಕ
ಒಂದೇ ಗ್ರಂಥದಲ್ಲಿ ಕೆಲವು ಭಾಗಗಳು ಹಿಂದಿನ ಕಾಲಕ್ಕೂ, ಇ
ಕೆಲವು ಈಚಿನ ಕಾಲಕ್ಕೂ ಸೇರಿದಂತೆ ಕಾಣುತ್ತದೆ. ಆದರೆ ಈ ಶಾಸ್ತ್ರವ
ಬಲ್ಲವರು ಸೂತ್ರಗಳ ಕಾಲ, ಸ್ಮೃತಿಗಳ ಕಾಲ, ಭಾಷ್ಯ ನಿಬಂಧಗಳ ಕ
ಎಂದು ಮೂರು ಬಗೆಯಾಗಿ ವಿಂಗಡಿಸುತ್ತಾರೆ. ಬಹಳ ಹಿಂದಿನ ಧ
ಶಾಸ್ತ್ರ ಗ್ರಂಥಗಳು ಸೂತ್ರಗಳ ರೂಪದಲ್ಲಿವೆ. ಈ ಸೂತ್ರಗಳು ಬ
ಮಟ್ಟಿಗೆ ಸಣ್ಣ ಸಣ್ಣ ವಾಕ್ಯಗಳು. ಅವುಗಳಲ್ಲಿ ಹಲವು ವೇಳೆ ಕ್ರಿ
ಪದವೇ ಇರುವುದಿಲ್ಲ. ಸಣ್ಣ ನುಡಿಗಳು ಅವು. ವಿಷಯಗಳು ಅಡಕವ
ಸೂಚನೆ ಮಾತ್ರ ಅಲ್ಲಿ ಇರುತ್ತದೆ. ಕೆಲವು ವೇಳೆ ಬರಿಯ ಪದಗಳ ಪ
ಇರುವುದು.* ಇಂಥಿಂಥ ವಿಷಯಗಳನ್ನು ಕುರಿತು ಈ ನೇಮ ಎ
ಅರಿತವರು ನೆನಪು ಮಾಡಿಕೊಳ್ಳುವಂತೆ, ಅವರ ಕೈಗೆ ಉಪಯೋಗ
ಒದಗುವಂತೆ ಮಾತ್ರ ಸೂತ್ರಗಳು ಇರುತ್ತವೆ. ಒಂದು ಪದಕ

*ಉದಾ.—ಚಕ್ರಿ ದಶಮೀಸ್ಥ, ಅನುಗ್ರಾಹ್ಯ, ವಧೂ, ಸ್ನಾತಕ, ರಾಜಭ್ಯಃ ಪಥೋ ದಾ
ಗೌತಮ ಧರ್ಮಸೂತ್ರ VI-೨೫ ಗಾಡಿಗಳಲ್ಲಿ ಹೋಗುವವರು, ಅತಿವೃದ್ಧರು, ರೋಗಿ
ವಧುಗಳು, ಸ್ನಾತಕರು, ರಾಜರು ಇವರಿಗೆ ದಾರಿಯನ್ನು ಮೊದಲು ಬಿಟ್ಟುಕೊಡಿ.

ಇನ್ನೊಂದು ಪದಕ್ಕೂ ಇರುವ ಕಟ್ಟಡಸಂಬಂಧಗಳಿಂದ ಹಲವು ವೇಳೆ ಇವಕ್ಕೆ ಅರ್ಥಮಾಡಬೇಕಾಗುತ್ತದೆ. ತಿಳಿದವರಿಗೆ ಇದರ ಅರ್ಥ ಸುಲಭ. ತಿಳಿಯದವರಿಗೆ ಸೂತ್ರಗಳ ಅರ್ಥ ಹೀಗೇ ಸರಿ ಎಂದು ತಿಳಿದವರು ವಿವರಿಸಬೇಕಾಗುತ್ತದೆ. ಆ ವಿವರಣೆಗಳನ್ನು ಭಾಷ್ಯಕಾರರು ಮಾಡುತ್ತಾರೆ. ಕಾಲ ಬದಲಾಯಿಸುವುದು; ಆಚಾರ ಬದಲಾಯಿಸುವುದು; ಪ್ರಾಂತ ಪ್ರಾಂತಕ್ಕೆ ವ್ಯತ್ಯಾಸ ಇರುವುದು; ಬೇರೆ ಬೇರೆ ಶಾಖೆಯವರು ಬೇರೆ ಬೇರೆಯ ಸಂಪ್ರದಾಯಗಳಿಗೂ ಪದ್ಧತಿಗಳಿಗೂ ಹೆಚ್ಚು ಗಮನ ಕೊಡುವರು; ಆದ್ದರಿಂದ ಸೂತ್ರ ಸೂತ್ರಗಳಿಗೆ ವಿರೋಧವಿರುವಂತೆ ತೋರುವುದು.† ಅವುಗಳ ಅರ್ಥವನ್ನು ನಿರ್ಣಯ ಮಾಡುವಾಗ ಒಂದೇ ಅಭಿಪ್ರಾಯ ಬರುತ್ತಿರಲಿಲ್ಲ. ಇದರಿಂದ ಅನೇಕ ತೊಡಕುಗಳೂ ಸಂದೇಹಗಳೂ ಉಳಿಯುವಂತೆ ಆಯಿತು. ಒಂದೊಂದು ಪಂಥದವರು ಒಂದೊಂದು ಬಗೆಯಾಗಿ ತೀರ್ಮಾನ ಮಾಡಿಕೊಳ್ಳುವುದು ಲಕ್ಷಣವಾಯಿತು. ಭಾಷ್ಯಕಾರರು ವಿಷಯವನ್ನೂ ವಿಶದಮಾಡುತ್ತಿದ್ದರು. ಒಂದೊಂದಕ್ಕೆ ಹೊಂದಿಕೆ ಆಗುವಂತೆ ಅರ್ಥ ಬೆಳಸುತ್ತಿದ್ದರು. ಧರ್ಮಶಾಸ್ತ್ರದ್ದು ಏಕವಾಕ್ಯವೆಂದು ತಿಳಿಸುತ್ತಿದ್ದರು. ಒಟ್ಟು ಆಚಾರ ವ್ಯವಹಾರಗಳಲ್ಲಿ ಎಲ್ಲರಿಗೂ ಹೊಂದುವಂತಹ ಅಂಶಗಳು ಬಹುವಾಗಿ ಏರ್ಪಟ್ಟು ಧರ್ಮಸೂತ್ರಗಳು ಎಲ್ಲರಿಗೂ ಹೊಂದತಕ್ಕದ್ದು ಎಂಬ ಸಂಗತಿ ಹರಡಿತು.

ಧರ್ಮ ಸೂತ್ರಗಳೂ, ಗೃಹ್ಯಸೂತ್ರಗಳೂ ಬಹು ಮಟ್ಟಿಗೆ ಆರ್ಯ ಜನಾಂಗಕ್ಕೆಲ್ಲ ಹೊಂದುವುವು. ಗೃಹ್ಯಸೂತ್ರಗಳು ಕುಟುಂಬ ಜೀವನದಲ್ಲಿ ಪ್ರತಿ ದಿನದ ಬುದುಕಿನ ನೇಮಗಳನ್ನು ತಿಳಿಸುತ್ತವೆ. ಬೆಳಗ್ಗೆಯಿಂದ ರಾತ್ರಿಯ ವರೆಗೂ ಮಾಡಬೇಕಾದ ಕರ್ಮ, ಮದುವೆ, ಆಹಾರ, ಹುಟ್ಟು, ಸಾವು, ಇತರ ಸಂಸ್ಕಾರಗಳು, ಮನುಷ್ಯನ ಬೆಳವಣಿಗೆಯಲ್ಲಿ ಸಹಾಯವಾದ ಆಶ್ರಮದ ಧರ್ಮಗಳು, ಅತಿಥಿಗಳು, ವೇದದ ಅಧ್ಯಯನ, ಅಧ್ಯ

† ಉದಾ.—ಹೆಂಗಸರಿಗೆ ಉಪನಯನ ಉಂಟೆ, ಇಲ್ಲವೆ?

ಯನ ಮಾಡಕೂಡದಾದ ದಿನಗಳು, ಶ್ರಾದ್ಧ—ಇವೂ ಇಂಥವೂ
ವಾಗುವುವು. ಅವುಗಳಲ್ಲಿ ಜನಸಾಮಾನ್ಯರು ಎಲ್ಲರಿಗೂ ಹೊಂದುವ ನ
ಅವರ ಹಕ್ಕು, ಕರ್ತವ್ಯ, ಬಾಧ್ಯತೆ, ಹೊಣೆಗಾರಿಕೆ ಇರುವುದಿಲ್ಲ. ಕ
ಧರ್ಮಸೂತ್ರಗಳಲ್ಲಿಯೂ ಈ ಸಂಬಂಧವಾಗಿ ಅಲ್ಪ ಸ್ವಲ್ಪ ಭಾಗ ಇದ
ಅವುಗಳಲ್ಲಿ ಕುಟುಂಬ ಜೀವನದ ಕಾರ್ಯಕರ್ಮಗಳ ವಿವರಣೆ ಕರ
ಒಟ್ಟು ದೇಶದ ಜನರ ಶಾಸನಗಳು, ರೂಢಿ, ಸಂಪ್ರದಾಯ ಇವುಗಳ
ರಣೆ ಅಲ್ಲಿ. ಬಹುವಾಗಿ ಪೂರ್ವಾಚಾರ್ಯರು ನೆನಪಿನಲ್ಲಿಟ್ಟುಕೊಂಡು
ಸಿದ ಧರ್ಮದ ಕಟ್ಟಳೆಗಳು ಕೂಡಿಸಿರುತ್ತದೆ. ಭಾಷೆ ಹಿಂದಿನ ಕಾಲ
ಬಹುಮಟ್ಟಿಗೆ ಗದ್ಯದಲ್ಲಿರುತ್ತವೆ. ಅಲ್ಲಿ ಇಲ್ಲಿ ಸುಲಭವಾದ ಪದ
ಬಹುದು. ಸ್ಮೃತಿಗಳಲ್ಲಿ ವಿಷಯಗಳನ್ನು ವಿಂಗಡಿಸಿ ಆಯಾ ಭಾ
ಸಂಬಂಧಪಟ್ಟ ವಿಷಯವನ್ನು ಮಾತ್ರವೇ—ಆದರೆ ಹೆಚ್ಚು ವಿವರ
ಆಯಾ ಭಾಗದಲ್ಲಿ ಹೇಳುತ್ತಾರೆ. ಇಲ್ಲಿ ಕ್ರಮ ಸ್ವಲ್ಪ ಸಡಿಲ. ಧ
ಸೂತ್ರಗಳು ಒಟ್ಟಿನಲ್ಲಿ ಸ್ಮೃತಿಗಳಿಗಿಂತ ಹಿಂದಿನವು.

ಈ ಸೂತ್ರಗಳಲ್ಲಿ ಗೌತಮ ಧರ್ಮ ಸೂತ್ರಗಳು ಎಂಬ ಹೆಸರಿನ ಗ್ರ
ಬಹು ಹಿಂದಿನದು. ಅದರಲ್ಲಿ ಇರುವ ವಿಷಯಗಳ ಲಘು ಪರಿಚಯ ವ
ಕೊಟ್ಟರೆ ಸ್ವಲ್ಪ ಹೆಚ್ಚು ಕಡಮೆ ಸೂತ್ರಗಳಲ್ಲೆಲ್ಲ ಯಾವ ಅಂಶಗ
ತಿಳಿವಳಿಕೆ ಸಿಕ್ಕುತ್ತದೆ ಎಂಬುದು ಗೊತ್ತಾಗುವುದು. ಗೌತಮ ಧ
ಸೂತ್ರಗಳಲ್ಲಿ ಇಪ್ಪತ್ತೆಂಟು ಅಧ್ಯಾಯಗಳಿವೆ. (ಕಡೆಯಲ್ಲಿ ಕ್ರಿಯಾಕಾ
ವೆಂಬ ಭಾಗವಿದೆ. ಕ್ರಿಯಾಕಾಂಡಗಳು ಹದಿನೆಂಟು.) ೧. ಧರ್ಮ
ಪ್ರಮಾಣಗಳು ಯಾವುವು? ನಾಲ್ಕು ವರ್ಣಗಳವರಿಗೂ ಉಪನ
ಹೇಗೆ? ಶೌಚ ಆಚಮನ ವಿಧಿಗಳು, ಗುರುಗಳಲ್ಲಿ ಅಧ್ಯಯನಮಾ
ಬಗೆ; ೨. ಉಪನಯನವಾಗದೆ ಇರುವವರು, ಬ್ರಹ್ಮಚಾರಿಗಳು, ಆ
ನಡತೆಗೆ ಸಂಬಂಧಪಟ್ಟ ವಿಚಾರ; ಭಿಕ್ಷೆಯ ವಿಚಾರ, ಶಿಷ್ಯರ ಮೇಲೆ ಶಾ
ಗಳು, ಗುರುದಕ್ಷಿಣೆ; ೩. ನಾಲ್ಕು ಆಶ್ರಮಗಳಿಗೂ ಸಂಬಂಧಿಸಿದ ವಿಷ

೪. ಗೃಹಸ್ಥನ ಧರ್ಮ, ಮದುವೆ, ಜಾತಿಭೇದಗಳು, ಒಂದು ವರ್ಣದಿಂದ ಇನ್ನೊಂದು ವರ್ಣ ಹೇಗಾಗುವುದು ; ೫. ಮದುವೆಯಾದ ಹೆಂಡತಿಯಲ್ಲಿ ಗಮನ, ಐದು ಮಹಾಯಜ್ಞಗಳು, ತರ್ಪಣ, ದಾನ, ಮಧುಪರ್ಕ, ಅತಿಥಿ ಪೂಜೆ; ೬. ಮರ್ಯಾದೆಗಳು : ಹಿರಿಯರಿಗೆ, ಗುರುಗಳಿಗೆ, ಸಂಬಂಧಿಗಳಿಗೆ, ದಾರಿಯಲ್ಲಿ ನಡೆಯುವಾಗ ; ೭. ಸಾಮಾನ್ಯವಾಗಿಯೂ ಆಪತ್ತಿನ ಕಾಲ ದಲ್ಲಯೂ ಬ್ರಾಹ್ಮಣನು ಯಾವ ಜೀವನವನ್ನು ನಡಸಬಹುದು; ಬ್ರಾಹ್ಮ ಣನು ಯಾವುದನ್ನು ಕೊಳ್ಳಬಾರದು, ಮಾರಬಾರದು ; ೮. ರಾಜರ, ಬ್ರಾಹ್ಮ ಣರ ಮಹಿಮೆ, ನಲವತ್ತು ಸಂಸ್ಕಾರಗಳು, ಎಂಟು ಆತ್ಮಗುಣಗಳು ; ೯. ವೇದಾಧ್ಯಯನ ಮುಗಿಸಿ ಗೃಹಸ್ಥರಾಗದೆ ಇರುವ ಸ್ನಾತಕರ ವ್ರತ, ಮತ್ತು ಸ್ನಾತಕ ಫಲಗಳು ; ೧೦. ನಾಲ್ಕು ವರ್ಣಗಳವರ ಧರ್ಮ, ಕರ್ಮ, ಶುಲ್ಕ ವಿಚಾರ ; ೧೧. ರಾಜಧರ್ಮ, ಪುರೋಹಿತ ವಿಚಾರ, ದಂಡ ವಿಚಾರ ; ೧೨. ನಿಯಮಗಳನ್ನು ಮೀರುವವರೆಗೆ ಯಾವ ದಂಡಗಳು ? ಉದಾ.—ಕಳ್ಳತನ, ಪಶು ಹಿಂಸೆ; ಬ್ರಾಹ್ಮಣರಿಗೂ, ಶೂದ್ರರಿಗೂ ಇರುವ ದಂಡಗಳು ; ಸಾಲ ಕೊಡುವುದು, ಹಣವನ್ನು ನ್ಯಾಸವಾಗಿ ಇಡುವುದು ; ಮಾನಾಪಹಾರದ ವಿಚಾರ, ಬಲಾತ್ಕಾರದಿಂದ ಹೆಂಗಸನ್ನು ಕೆಡಿಸುವವರಿಗೆ ದಂಡ ; ೧೩. ಸಾಕ್ಷಿ ಪ್ರಕರಣ, ನ್ಯಾಯನಿರ್ಣಯ ; ೧೪. ಆಶೌಚ (ಮೈಲಿಗೆ) ಅದರ ನೇಮಗಳು, ರಾಜ ಮುಂತಾದವರಿಗೆ ಹೇಗೆ ಆಶೌಚವಿಲ್ಲ ; ೧೫. ಶ್ರಾದ್ಧ ಭಾಗ, ಎಂತಹ ಬಾಹ್ಮಣರನ್ನು ಕರೆಯಬೇಕು, ಎಂಥವರು ಕೂಡದು (ನಿಷಿದ್ಧ), ದೃಷ್ಟಿದೋಷ, ಪಂಕ್ತಿಪಾವನತೆ ; ೧೬. ಉಪಾಕರ್ಮ ಮತ್ತು ವೇದವನ್ನು ಯಾವಾಗ ಅಭ್ಯಾಸ ಮಾಡಕೂಡದು ; ೧೭. ತಿನ್ನುವ ಆಹಾರ, ಯಾವುದನ್ನು ತಿನ್ನಕೂಡದು ; ೧೮. ಸ್ತ್ರೀಧರ್ಮ, ಹೆಂಗಸಿಗೆ ಮಕ್ಕಳಿಲ್ಲ ದಿರುವಾಗ ಗಂಡ ತೀರಿಹೋದರೆ ಆ ಹೆಂಗಸು ನಿಯೋಗವೆಂಬ ವಿಧಾನ ದಿಂದ ಮಕ್ಕಳನ್ನು ಪಡೆಯಬಹುದೆ ? ಸ್ವಯಂವರ ಮತ್ತು ಕನ್ಯಾದಾನ ; ೧೯. ಪ್ರಾಯಶ್ಚಿತ್ತಗಳು, ಜಪ, ತಪಸ್ಸು, ದಾನ, ಹೋಮ, ಉಪವಾಸ

ಮುಂತಾದುವು ; ೨೦. ಪತಿತರನ್ನು ತ್ಯಾಗಮಾಡುವುದು ಮತ್ತು ಪ್ರಾ
ಶ್ಚಿತ್ತ ಮಾಡಿಕೊಂಡ ಮೇಲೆ ಪುನಃ ಸೇರಿಸಿಕೊಳ್ಳುವ ರೀತಿ; ೨೧. ಪತಿತ
ಯಾರು ? ಸಾಮಾನ್ಯ ಪಾತಕ, ಉಪಪಾತಕ, ಮಹಾಪಾತಕರು ; ೨೨. ಹ
ಗಳಿಗೂ ವ್ಯಭಿಚಾರಕ್ಕೂ ಪ್ರಾಯಶ್ಚಿತ್ತ; ೨೩. ಸುರಾಪಾನ, ನರಿ ನಾ
ಗಳ ಮಾಂಸ ತಿನ್ನುವುದು, ಗುರುತಲ್ಪಗಮನ ಮುಂತಾದವುಗಳಿಗೆ ಪ್ರಾ
ಶ್ಚಿತ್ತ ; ೨೪. ಮಹಾಪಾತಕಕ್ಕೆ ರಹಸ್ಯ ಪ್ರಾಯಶ್ಚಿತ್ತಗಳು, ಇತರ ಬಗೆ
ಕೃಚ್ಛ್ರಗಳು (ಮಾಡಿದ ಪಾಪಕ್ಕಾಗಿ ತಾವೇ ತಮ್ಮ ಮೇಲೆ ವಿಧಿಸಿಕೊ
ಬೇಕಾದ ಶಿಕ್ಷೆಗಳು, ಶುದ್ಧಿಕರ್ಮಗಳು) ; ೨೫. ಉಪಪಾತಕರಿಗೆ ಪ್ರಾ
ಶ್ಚಿತ್ತ; ೨೬. ಕೃಚ್ಛ್ರ, ಅತಿಕೃಚ್ಛ್ರಗಳು ; ೨೭. ಚಾಂದ್ರಾಯಣವ
ವ್ರತ ; ೨೮. ಆಸ್ತಿ ವಿಭಾಗ—ಹಿರಿಯ ಮಗನಿಗೆ, ಇತರ ಮಕ್ಕಳಿಗೆ ಭಾ
ವಿಭಾಗವಾದ ಮೇಲೆ ಹುಟ್ಟಿದ ಮಕ್ಕಳಿಗೆ ಎಷ್ಟಂಶ ? ಸ್ತ್ರೀಧನ, ತಾ
ಸಂಪಾದಿಸಿದ ಆಸ್ತಿ ವಿಚಾರ, ಆಸ್ತಿ ವಿಭಾಗದಲ್ಲಿ ಆರು ಬಗೆಯ ಹಿರಿ
ಕಿರಿಯ ಮಕ್ಕಳಲ್ಲಿ ಹಂಚಿಕೆ ಹೇಗೆ ? ಕನ್ಯೆಯರ ಮಕ್ಕಳು, ಬೇರೆ ವರ್ಣ
ವರಿಗೆ ಹುಟ್ಟಿದವರು, ಆಸ್ತಿಯ ಅಂಶವೇ ಇಲ್ಲದವರು, ಯಾವುದನ
ಭಾಗಿಸಕೂಡದು ? ಪರಿಷತ್ ಎಂದರೇನು ? ಧರ್ಮ ತಿಳಿದವರು ಯಾರು
ಧರ್ಮ ತಿಳಿದುದರ ಫಲವೇನು ?

—ಬಹುಮಟ್ಟಿಗೆ ಇದು ಈ ಸೂತ್ರಗಳಲ್ಲಿ ವಿವರಣೆಯಾಗುವ ವಿಷಯ
ಹಾಗೆಯೇ ಇದು ನಮ್ಮ ಪರಿಚಯಕ್ಕೆ ಬರುವ ಒಂದು ಜನದ ರೀ
ನೀತಿಗಳ ಮತ್ತು ಜೀವನಪದ್ಧತಿಯ ಚಿತ್ರ. ಆ ಪ್ರಪಂಚಕ್ಕೆ ಸಂಬಂಧಪಟ
ಕಟ್ಟು ನಿಟ್ಟುಗಳ ಮತ್ತು ನಡವಳಿಕೆಗಳ ಸ್ವರೂಪವನ್ನು ಈ ಸೂತ್ರಗ್ರಂ
ವಿವರಿಸುತ್ತದೆ.

೬

ಸ್ಮೃತಿಗಳಲ್ಲಿ ಮನುಸ್ಮೃತಿ, ಯಾಜ್ಞವಲ್ಕ್ಯಸ್ಮೃತಿ, ಪರಾಶರಸ್ಮೃತಿ ಎಂಬವು ಹೆಸರಾದುವು. ಇವುಗಳಲ್ಲಿ ಹೆಚ್ಚು ಪ್ರಸಿದ್ಧವಾದುದು ಮನುಸ್ಮೃತಿ. ಸ್ವಾಯಂಭುವ ಮನು ಎಂಬಾತನು ಅದನ್ನು ಬರೆದನಂತೆ. ಸುಲಭವಾದ ಶ್ಲೋಕಗಳಲ್ಲಿ ಬರೆದಿರುವ ಹನ್ನೆರಡು ಅಧ್ಯಾಯಗಳ ಗ್ರಂಥ ಇದು. ಇಷ್ಟು ಹೊತ್ತಿಗಾಗಲೇ ಧರ್ಮಶಾಸ್ತ್ರವನ್ನು ಮನುಷ್ಯರಾರೂ ನಿರ್ಮಾಣ ಮಾಡಲಿಲ್ಲ, ಇದರ ನಿರ್ಮಾಣ ದೇವರಿಂದ ಆಯಿತು ಎಂಬ ಅಭಿಪ್ರಾಯ ಬಲಿತಿತ್ತು. ಸ್ಮೃತಿಗಳ ಉತ್ಪತ್ತಿ ಹೇಗೆ? ಎಂಬುದು, ಕಾಲ ವಿಭಾಗಗಳು, ಸೃಷ್ಟಿ ವಿಚಾರ ಮುಂತಾದುವನ್ನು ಇಲ್ಲಿ ಹೇಳುತ್ತಾರೆ. ಬಹುವಾಗಿ ಆಚಾರವೇ ಧರ್ಮದಲ್ಲಿ ಪ್ರಧಾನ ಎಂಬ ನಂಬಿಕೆ ಉಂಟಾಗಿರುತ್ತದೆ. ಜನವರ್ಗದಲ್ಲಿ ಜಾತಿವಿಭಾಗ ವಿಶೇಷವಾಗಿ ಈ ಹೊತ್ತಿಗೆ ಏರ್ಪಟ್ಟು ಈ ವರ್ಣಕ್ಕಿಂತ ಆ ವರ್ಣ ಮೇಲು, ಇನ್ನೊಂದು ಬೀಳು, ಎಂಬ ಸಂಗತಿ ಹೆಚ್ಚು ಕಾರ್ಯಕಾರಿಯಾಗಿರುವಂತೆ ಕಾಣುತ್ತದೆ. ಆದುದರಿಂದ ಆಯಾ ವರ್ಣಗಳ ಕರ್ತವ್ಯಗಳನ್ನು ಸ್ಮೃತಿಗಳು ವಿಶೇಷವಾಗಿ ಪಟ್ಟಿ ಮಾಡುತ್ತವೆ. ಅವುಗಳನ್ನು ಮೀರಿದರೆ ಶಿಕ್ಷೆ ಹೇಗಾಗಬೇಕು ಎನ್ನುವ ವಿಧಿಯೂ, ವಿಧಾನಗಳೂ ಇಲ್ಲಿ ವಿಸ್ತಾರವಾಗುತ್ತವೆ. ವಿಷಯಗಳೆಲ್ಲಾ ಸೂತ್ರಗಳಲ್ಲಿ ಇರುವಂಥವೇ ಆದರೂ ಇಲ್ಲಿ ಅಧ್ಯಾಯಗಳು ಸುಮಾರು ಗೊತ್ತಾದ ವಿಭಾಗಗಳಲ್ಲಿ ವಿಂಗಡವಾಗಿ ವಿಷಯವನ್ನು ಕ್ರಮವಾಗಿ ತಿಳಿಸುತ್ತವೆ. ಏಳು ಎಂಟನೆಯ ಅಧ್ಯಾಯಗಳಲ್ಲಿ ರಾಜ ಧರ್ಮವೂ, ದಂಡಸ್ವರೂಪವೂ, ರಾಜ್ಯದ ಯೋಗಕ್ಷೇಮ ಮತ್ತು ಸುರಕ್ಷಣೆಯ ಮಾರ್ಗಗಳೂ ವಿವರವಾಗುತ್ತವೆ. ರಾಜನು ಧರ್ಮಾಧಿಕಾರಿಯಾಗಿ ಹೇಗೆ ನ್ಯಾಯ ನಿರ್ಣಯ ಮಾಡತಕ್ಕದ್ದು ಎಂಬ ಭಾಗ ವಿಸ್ತಾರವಾಗಿ ಕಾಣುತ್ತದೆ. ಕಡೆಯ

ಅಧ್ಯಾಯದಲ್ಲಿ ಜ್ಞಾನ ಮತ್ತು ಕರ್ಮಗಳ ಸ್ವರೂಪದ ವಿವರಣೆ ಜೊತೆಗೆ ನಾಲ್ಕನೆಯ ಪುರುಷಾರ್ಥವಾದ ಮೋಕ್ಷಕ್ಕೆ ಉಪಾಯವ ತಿಳಿಸಿ ಯಾವನೇ ಆಗಲಿ ಧರ್ಮ ಶಾಸ್ತ್ರವನ್ನು ತಿಳಿದು ಸರಿಯಾಗಿ ನಡ ಕೊಂಡರೆ ತನಗೆ ಇಷ್ಟವಾದುದನ್ನೆಲ್ಲ ಗಳಿಸಿಕೊಳ್ಳಬಹುದು ಎಂಬುದ ಹೇಳಿ ಆ ಗ್ರಂಥ ಮುಗಿಯುತ್ತದೆ.

ಮನು, ಯಾಜ್ಞವಲ್ಕ್ಯ ಈ ಸ್ಮೃತಿಗಳಿಗೆ ಹೆಸರಾದ ದೊಡ್ಡ ವ್ಯಾಖ್ಯಾ ಗಳಿವೆ. ಅವುಗಳ ಆಧಾರದ ಮೇಲೆಯೇ ಇಂದಿನ ಹಿಂದೂ ಧರ್ಮಪ ಏರ್ಪಟ್ಟಿರುವುದು. ಮನುಸ್ಮೃತಿಗೆ ವ್ಯಾಖ್ಯಾನ ಮಾಡಿದವರಲ್ಲಿ ಮೇ ತಿಥಿ ಎಂಬಾತನು ಹೆಸರಾದವನು. ಕುಲ್ಲೂಕ ಭಟ್ಟನೆಂಬಾತನು ಸ್ಮೃತಿಯ ಅರ್ಥ ವಿಶದವಾಗುವಂತೆ ವಿಷಯಗಳನ್ನು ಸಂಗ್ರಹ ಮಾ ತ್ತಾನೆ. ಯಾಜ್ಞವಲ್ಕ್ಯ ಸ್ಮೃತಿಯಲ್ಲಿ ಹೆಚ್ಚು ಕ್ರಮವಿದೆ. ಹೆಚ್ಚು ಅ ವಾಗಿ, ಸ್ಪಷ್ಟವಾಗಿ ಅದು ವಿಷಯಗಳನ್ನು ತಿಳಿಸುತ್ತದೆ. ಮೂರು ಕಾ ಗಳಲ್ಲಿ ಈ ಸ್ಮೃತಿಕಾರನು ವಿಷಯಗಳನ್ನೆಲ್ಲ ಬಹು ವಿತರಣೆಯಿಂದ ವಿ ಡಿಸಿ ಹೇಳುತ್ತಾನೆ. ಇದಕ್ಕೆ ವ್ಯಾಖ್ಯಾನ ಮಾಡಿದವರಲ್ಲಿ ವಿಜ್ಞಾನೇ ಎಂಬಾತನು ಮುಖ್ಯ. ಈತನ ವ್ಯಾಖ್ಯಾನಕ್ಕೆ ಮಿತಾಕ್ಷರವೆಂದು ಹೆಸ ಮಿತಾಕ್ಷರ ವ್ಯಾಖ್ಯಾನದಲ್ಲಿ ಆ ಕಾಲದವರೆಗೆ ನಡದು ಬಂದ ಸುಮಾ ಎರಡು ಸಾವಿರ ವರ್ಷಗಳ ಧರ್ಮಶಾಸ್ತ್ರದ ಸ್ವರೂಪವೆಲ್ಲ ಪರಿಶೀಲನೆ ವಿವರಣೆಗೂ, ನಿರ್ಣಯಕ್ಕೂ ಬರುವುದು. ದತ್ತನ್ನು ತೆಗೆಯುವ ವಿಚಾ ಆಸ್ತಿವಿಭಾಗ, ಪಿತ್ರಾರ್ಜಿತ ಸ್ವತ್ತುಗಳಿಗೆ ಹಕ್ಕುದಾರಿಕೆ, ಆಸ್ತಿಯ ಹ ಗಳು ಮುಂತಾದ ಅನೇಕ ಹಿಂದೂ ಧರ್ಮ ಅಂಶಗಳಲ್ಲಿ ಈ ಮಿತಾಕ್ಷರ ಬಹುಮಟ್ಟಿನ ಪ್ರಭಾವ ಇಂದೂ ಇದೆ.

ಮುಂದಿನ ಕಾಲದಲ್ಲಿ ಧರ್ಮಶಾಸ್ತ್ರವನ್ನು ಕುರಿತು ಬರೆದವರು ವಿಷ ಗಳನ್ನು ವಿಂಗಡಿಸಿಕೊಂಡು ಸಂಗ್ರಹಗಳನ್ನು ಬರೆದರು. ದೇಶದ ಬೇರೆ ಭಾಗಗಳಲ್ಲಿ ಇದ್ದ ಜನ ಯಾವ ರೀತಿ ನಡೆದುಕೊಂಡರೆ ಸ್ವಂತಕ

ತಮ್ಮ ವರ್ಣಕ್ಕೂ, ಹಿಂದೂ ಧರ್ಮಕ್ಕೂ ಒಂದು ಪ್ರಯೋಜನ ದೊರಕುವು ದೆಂಬುದನ್ನು ಸ್ಪಷ್ಟಪಡಿಸುವುದು ಈ ಎಲ್ಲಾ ಶಾಸ್ತ್ರಕಾರರ ಉದ್ದೇಶ. ಬೇರೆ ಬೇರೆ ಕಾಲದ ಬೇರೆ ಬೇರೆ ಆಚಾರ, ಪದ್ಧತಿ ಮತ್ತು ಪ್ರಯೋ ಜನಗಳನ್ನು ಹೊಂದಿಸಿ ಒಂದು ಖಚಿತವಾದ ಅರ್ಥವೂ ನಡತೆಯೂ ಶಕ್ಯ ವಾಗುವಂತೆಯೂ ಆರ್ಯಧರ್ಮವು ಒಂದು ವ್ಯವಸ್ಥೆಗೆ ನಿಲ್ಲುವಂತೆಯೂ ಇವರೆಲ್ಲ ಮಾಡಿಕೊಟ್ಟರು. ಆದುದರಿಂದಲೇ ಬೇರೆ ಬೇರೆ ಮತ ಪಂಥ ಗಳು, ರಾಜಕೀಯ ದಾಳಿಗಳು, ಪ್ರಾಬಲ್ಯ ಉಂಟಾಗಿ ಹಿಂದೂ ಸಮಾಜ ವನ್ನು ನಾಶಮಾಡುವುದಕ್ಕೆ ಕೂಡ ಪ್ರಯತ್ನಪಟ್ಟಾಗ ಹಿಂದೂಧರ್ಮ ಅವನ್ನು ಎದುರಿಸುವುದಕ್ಕೂ, ಉಳಿದು ನಿಲ್ಲುವುದಕ್ಕೂ ಶಕ್ಯವಾಯಿತು.

## ೭

ವ್ಯಕ್ತಿಗೆ, ಕುಟುಂಬಕ್ಕೆ, ವರ್ಣಕ್ಕೆ ಸಂಬಂಧಪಟ್ಟ ವಿಷಯಗಳಿಗೆ ಸೂತ್ರಗಳೂ, ಸ್ಮೃತಿಗಳೂ ಗಮನ ಕೊಟ್ಟಾಗ ಇವನ್ನು ಕಾಪಾಡುವ ರಾಜಧರ್ಮವನ್ನು ಕುರಿತು ಅವರು ಹೇಳಿದುದು ಸಹಜ. ಆದರೆ ರಾಜನ ಆಳಿಕೆಗೆ ಒಳಪಟ್ಟ ಎಲ್ಲ ಶಿಕ್ಷೆ, ರಕ್ಷೆಯ ಏರ್ಪಾಡಿನ ಸ್ವರೂಪವು ವಿವರ ವಾಗಿ ತಿಳಿಯಬೇಕಲ್ಲವೆ? ಶಾಂತಿಕಾಲದಲ್ಲಿಯೂ ಯುದ್ಧ ಸಮಯ ದಲ್ಲಿಯೂ ರಾಜಧರ್ಮ ಹೇಗೆ ನಡೆಯಬೇಕು? ಎಂಬ ವಿಚಾರವಾಗಿ ಬೇರೆ ಗ್ರಂಥಗಳು ಇವೆ. ಕೌಟಿಲ್ಯನ ಅರ್ಥಶಾಸ್ತ್ರ, ಬೃಹಸ್ಪತಿಯ ಸ್ಮೃತಿ, ಶುಕ್ರನೀತಿ ಮತ್ತು ಕಾಮಂದಕನ ನೀತಿಶಾಸ್ತ್ರ ಈ ಬಗೆಯ ಗ್ರಂಥಗಳು. ಅರ್ಥಶಾಸ್ತ್ರ ಬಹುಶಃ ಮನುಸ್ಮೃತಿಗಿಂತ ಹಿಂದಿನದೆಂದು ಅನೇಕರ ಮತ. ಅದರ ಸಹಾಯದಿಂದ ನಮ್ಮ ದೇಶದ ರಾಜಕೀಯ, ಸಾಮಾಜಿಕ ಮತ್ತು ಆರ್ಥಿಕ ಜೀವನ ಈಗ್ಗೆ ಎರಡು ಸಾವಿರ ವರ್ಷಗಳ ಹಿಂದೆ ಯಾವ ರೀತಿ ಇತ್ತು ಎಂಬುದರ ಚಿತ್ರ ಕಣ್ಣಿಗೆ ಕಟ್ಟಿದಂತೆ ಕಾಣುತ್ತದೆ.

ರಾಜನೇ ರಾಷ್ಟ್ರಕ್ಕೆ ಕಾರಣ. ಅವನೇ ಕಾಲಕ್ಕೆ ಕಾರಣ ಎಂಬ
ಆತನು ಯಾವ ಬಗೆಯಲ್ಲಿ ಧರ್ಮವನ್ನು ಪೋಷಿಸುತ್ತಾನೆಯೋ ಅ
ಹೊಂದಿಕೊಂಡು ಜನದ ಸುಖಸಂಪತ್ತಿ ಬೆಳೆಯುವುವು ಎಂಬುದನ್ನು
ವಿವರಿಸಲಾಗುತ್ತದೆ. ಜನದ ಉತ್ಪತ್ತಿಯಲ್ಲಿ ಆರರಲ್ಲಿ ಒಂದು ಪಾಲನ
ದಂಡ ಮುಂತಾದ ರೂಪದಲ್ಲಿ ಬಂದದ್ದನ್ನೂ ಪೂರ್ತಾ ತೆಗೆದುಕೊ
ರಾಜ್ಯಪಾಲನೆಮಾಡಬೇಕು. ಜನಕ್ಕೆ ರಾಜ್ಯವೇ ವಿಷ್ಣುವಾದರೆ ರಾಜ
ಸರ್ವ ಪ್ರಜೆಗಳು ವಿಷ್ಣುಸ್ವರೂಪ ಎಂಬುದು ನಂಬಿಕೆ. ಮನಸ್ಮೃತಿಯ
ಒಪ್ಪದಿರುವ ಅನೇಕ ಸಂಗತಿಗಳು ಇಲ್ಲಿ ನಡತೆಯಾಗುತ್ತವೆ. ಅರ್ಥಶಾಸ್ತ್ರ
ದೃಷ್ಟಿ ಹೆಚ್ಚು ಜನದ ಪ್ರತಿದಿನದ ಜೀವನದಲ್ಲಿ ನಾಟಿದೆ ಎನ್ನಬಹು
ಹದಿನೈದು ಅಧಿಕರಣಗಳಲ್ಲಿದೆ ಈ ಗ್ರಂಥ. ರಾಜನ ವಿನಯ, ಶಿಕ್ಷ
ರಾಜಕಾರ್ಯದಲ್ಲಿ ವಿಭಾಗಗಳು, ರಾಜಕಾರ್ಯದ ಅಧ್ಯಕ್ಷರು, ಧ
ನಿರ್ಣಯ ವಿಧಾನ, ಕಂಟಕ ಶೋಧ—ಎಂಬ ಆತಂಕಗಳ ನಿವಾರ
ರಾಜಕಾರ್ಯವನ್ನು ನಡಸುವ ಕಾರ್ಯವರ್ಗ, ರಾಜ್ಯದ ವಿಭಾಗಗ
ಅಂಗಗಳು, ರಾಜನ ಆರುಗುಣಗಳು, ಯುದ್ಧ ಸಂಧಿ ಸಮಯಗಳ
ನಡತೆ, ವ್ಯಾಪಾರ, ರಾಜರ ಜನರ ವ್ಯಸನಗಳು, ಕಷ್ಟಗಳು, ದಾ
ಸೇನಾಸಂಪಾದನೆ, ಒಳದೇಶದಲ್ಲಿ ಸುರಕ್ಷಣೆ, ಹೊರ ಒಳಗಿನ ಹಗೆ
ನಿವಾರಣೆ, ಯುದ್ಧ ವಿಧಾನ, ವ್ಯಾಪಾರ ವಾಣಿಜ್ಯ ಸಂಘಗಳು, ವ
ಮಂಡಲಗಳು, ಬಲಿಷ್ಠರಾದ ರಾಜರೊಡನೆ ವ್ಯವಹಾರ, ಹಗೆಯನ
ಉಪಾಯದಿಂದ ನಾಶಮಾಡಿ ಕೊನೆಗೆ ಜಯವನ್ನು ಪಡೆಯುವ ಮಾ
ಗಳು, ದುರ್ಗಗಳ ಜಯ, ಗುಪ್ತಚಾರವರ್ಗ, ಜಯಿಸಿದ ರಾಜ್ಯಗಳ
ಶಾಂತಿಸ್ಥಾಪಿಸುವ ಬಗೆ, ಗೂಢೋಪಾಯಗಳು, ಔಷಧಿ, ಮಂತ್ರ, ಮಾ
ಗಳಿಂದ ಶತ್ರುಗಳನ್ನು ನಾಶಮಾಡುವುದು ಮುಂತಾದುವನ್ನು ಅ
ಶಾಸ್ತ್ರ ತಿಳಿಸುತ್ತದೆ. ಎಂದ ಮೇಲೆ ಇದು ಹೆಚ್ಚಾಗಿ ರಾಜಕೀಯ ಜ
ನಕ್ಕೂ, ಲೋಕವ್ಯವಹಾರಕ್ಕೂ ಸಂಬಂಧಿಸಿದುದು. ರಾಜನೂ ದೇ

ಧರ್ಮಕ್ಕೆ ಒಳಪಟ್ಟೇ ನಡೆಯಬೇಕಾಗಿದ್ದರೂ ಪ್ರಬಲರಾದ ರಾಜರು ನಡೆಯುತ್ತಿದ್ದ ರೀತಿ ಇಲ್ಲಿ ಚೆನ್ನಾಗಿ ಕಾಣುತ್ತದೆ. ಒಟ್ಟು ಧರ್ಮಕ್ಕೆ ವಿರೋಧವಾಗದಂತೆ ಜನದ ಮತ್ತು ರಾಜರ ಪ್ರಿಯವೂ, ಸಂಪತ್ತೂ, ಬಲವೂ, ಕೀರ್ತಿ ಪ್ರತಿಷ್ಠೆಗಳೂ ದೊರಕುವಂತೆ ಮಾಡಿಕೊಳ್ಳಬೇಕು ಎಂಬ ಅಂಶ ಮೇಲೆ ಎದ್ದು ನಿಲ್ಲುತ್ತದೆ. ಅದಕ್ಕೆ ಒಳಪಟ್ಟು ರಾಜಶಾಸನಗಳನ್ನು ಮಾಡಿಕೊಳ್ಳಬಹುದಾಗಿತ್ತು. ಪಟ್ಟಾಭಿಷೇಕ ಕಾಲದಲ್ಲಿ ಆತನು ಮಾಡಿದ ಪ್ರತಿಜ್ಞೆಗಳನ್ನು ನಡಸದೆ ಇದ್ದರೆ ಆತನನ್ನು ಶಿಕ್ಷೆಗೆ ಈಡು ಮಾಡಿದ ಸಂದರ್ಭಗಳುಂಟು.

೮

ಈ ಎಲ್ಲ ಶಾಸ್ತ್ರಗ್ರಂಥಗಳಲ್ಲಿಯೂ ಆಪದ್ಧರ್ಮವೆಂಬ ಒಂದು ಭಾಗ ಇರುವುದುಂಟು. ಯುದ್ಧ ಮುಂತಾದ ಕಾಲಗಳಲ್ಲಿಯೂ ದಂಗೆ, ವಿಪ್ಲವ, ಬರ, ಪೀಡೆಗಳ ಕಾಲದಲ್ಲಿಯೂ, ಶಾಸ್ತ್ರಗಳು ವಿಧಿಸುವ ರೀತಿಯಲ್ಲಿ ನಡೆಯುವುದು ಅಶಕ್ಯವಾಗುವುದು. ಅಪಾಯ ಒದಗಿ ಪ್ರಾಣವನ್ನು ಉಳಿಸಿಕೊಳ್ಳಬೇಕಾದಾಗ ನಡವಳಿಕೆ ಹೇಗೆ ಸ್ವಲ್ಪಮಟ್ಟಿಗೆ ಸಡಿಲವಾಗಬಹುದು ಎಂಬಂಶವನ್ನು ವಿವರಿಸುವುದು ರೂಢಿ. ಆಪತ್ಕಾಲದ ರೀತಿ ನೀತಿಗಳನ್ನು ಸಾಮಾನ್ಯ ಶಾಂತಿಕಾಲದ ಜೀವನಕ್ಕೆ ಬಳಸುವ ದಾರಿ ಎಂದಿಗೇ ಆಗಲಿ ಸರಿಯಲ್ಲ. ದೇಶಾಚಾರ, ಕುಲಾಚಾರಗಳ ಮಾತೂ ಅಲ್ಲಲ್ಲಿ ಬರುತ್ತದೆ. ಪ್ರಾಂತಗಳಲ್ಲಿಯೂ ಕುಲಗಳಲ್ಲಿಯೂ ಹಿಂದಿನಿಂದ ಸರಿಯೆಂದುದನ್ನು ನಡಸಿಕೊಂಡು ಬರಬೇಕಾದುದು ಆ ಕುಲ ಆ ದೇಶಗಳವರ ಕರ್ತವ್ಯವಾಗಿರುತ್ತಿತ್ತು. ಸ್ವಲ್ಪ ಹೆಚ್ಚು ಕಡಮೆ ಇದ್ದರೆ ಅವುಗಳನ್ನು ಶಾಸ್ತ್ರಕಾರರು ಕ್ರೂರವಾಗಿ ಖಂಡಿಸದೆ ನಿರ್ಣಯಗಳನ್ನು ಮೃದುವಾಗಿ ಮಾಡುವ ಅವಕಾಶವಿದ್ದಿತು.

ಇದರಿಂದ ಒಂದು ವಿಶೇಷ ಸಂಗತಿ ಹೊರಪಡುತ್ತದೆ: ಧರ್ಮಶ
ಗ್ರಂಥಗಳು ಅನೇಕ, ಅವು ಬೇರೆ ಬೇರೆ ಕಾಲದವು, ಬೇರೆ ಬೇರೆ ಶ
ಗಳವರಿಗೂ ಪ್ರಾಂತಾಚಾರಗಳಿಗೂ ಹತ್ತಿರವಾದವು, ಆದುದರಿಂದ ಒಂ
ವಿಷಯವನ್ನು ಕುರಿತು ಅಭಿಪ್ರಾಯ ಬೇರೆಯಾಗಿರುವುದುಂಟು—ಎಂದ
ಕೆಲವು ವೇಳೆ ಸೂತ್ರಕಾರರೂ, ಸ್ಮೃತಿಕಾರರೂ, ಹಿಂದಿನ ಶಾಸ್ತ್ರಜ್ಞರ
ಪ್ರಾಯವನ್ನು ತಮ್ಮ ಸಹಾಯಕ್ಕೆ ತೆಗೆದುಕೊಳ್ಳುತ್ತಾರೆ. ಕೆಲವು ವ
ತಮ್ಮ ಅಭಿಪ್ರಾಯ ಬೇರೆ ಎಂದು ತಿಳಿಸುತ್ತಾರೆ. ಅದಕ್ಕೆ ಕಾರಣಗಳ
ಕೊಡುತ್ತಾರೆ, ವಾದಮಾಡುತ್ತಾರೆ. ಆಕ್ಷೇಪಣೆಗಳನ್ನು ನಿವಾರಿಸುತ್ತಾ
ವಿಷಯ ಸಂದೇಹಕ್ಕೆ ಅವಕಾಶಕೊಟ್ಟರೆ ಅಥವಾ ಒಂದು ಭಾಗ
ಇನ್ನೊಂದು ಭಾಗವೂ ಅಸಂಗತವಾಗಿದ್ದರೆ ಅರ್ಥವನ್ನು ಹೊಂದಿಸ
ದಕ್ಕೆ ಪ್ರಯತ್ನಿಸುತ್ತಾರೆ. ಕೆಲವು ಭಾಗಗಳನ್ನು ಸದ್ಯಃ ಆಚಾರದಲ್ಲಿ
ವೆಂದೋ (ಖಿಲ) ಅಥವಾ ಯುಗ ಧರ್ಮವೆಂದೋ ನುಡಿಯುತ್ತಾ
ಅಥವಾ ಕಲಿಯುಗದಲ್ಲಿ ನಿಷಿದ್ಧ-ವರ್ಜ್ಯ—ಎಂದು ಹೇಳುತ್ತಾರೆ. ಕೆ
ಧರ್ಮಗಳು ಒಂದೊಂದು ವರ್ಣದವರಿಗೆ ಮಾತ್ರ ಒಪ್ಪುತ್ತವೆ, ಎಲ್ಲರಿ
ಅಲ್ಲ ಎನ್ನುತ್ತಾರೆ.* ಕೆಲವು ವಿಧಿಗಳನ್ನು ಮುರಿದರೆ ಜನ ಎಂದೆಂ
ಪತಿತರಾಗುತ್ತಾರೆ. ಎಂಬಂಶದಲ್ಲಿ ಕೂಡ ಅಂಥವರಿಗೂ ಪ್ರಾಯಶ್ಚಿ
ಹೇಳಿ ಅವರು ಪುನಃ ಧರ್ಮಕ್ಕೆ ತಿರುಗಬಹುದೆಂಬ ಮಾತು ಬರುತ್ತ
ಅಷ್ಟು ದೊಡ್ಡದಲ್ಲದ ಪಾತಕಗಳಿಗೆ ಸಾಮಾನ್ಯ ದಂಡಗಳನ್ನೂ ಪ್ರಾ
ಶ್ಚಿತ್ತಗಳನ್ನೂ ವಿಧಿಸಿ ಪುನಃ ಒಳಕ್ಕೆ ಸೇರಿಸಿಕೊಳ್ಳುವ ಅವಕಾಶಕೊ
ತ್ತಾರೆ. ಈ ಎಲ್ಲ ಸಂಗತಿಗಳೂ ಜೀವನದ ಎಲ್ಲ ಅಂಶಗಳಿಗೂ ಹೊಂ

* ನಮ್ಮ ಸಮಾಜದಲ್ಲಿ ವ್ಯಕ್ತಿಗಳಿಗಿರುವ ಅನೇಕ ಕಷ್ಟಗಳು ಬ್ರಾಹ್ಮಣ ವರ್ಗದವರಿಗೆ ವಿ
ವಾಗಿ ಸಂಬಂಧಿಸಿದವು; ವಿವಾಹ ಕಾಲ, ದಾಂಪತ್ಯ ವಿಚ್ಛೇದ, ಪುನರ್ವಿವಾಹ, ವಿಧವಾಸಿ
ಮೈಲಿಗೆ, ವರ್ಣಶುದ್ಧಿ, ವ್ರತಗಳು, ದೇಶಾಂತರ ಗಮನ ಈ ಎಲ್ಲ ಸಂಬಂಧಗಳಲ್ಲಿಯೂ ಅವ
ನಿಯಮ ನಿರ್ಬಂಧ ಹೆಚ್ಚು. ಈ ಕಷ್ಟವೆಲ್ಲ ಅವರ ಪಾಲಿಗೆ ಬಂದದ್ದು. ಉಳಿದ ವರ್ಣ
ಈ ಅಂಶಗಳಲ್ಲಿ ಇಷ್ಟು ಪೀಡೆಯಿರಲಿಲ್ಲ, ಹೆಚ್ಚು ಧಾರಾಳವಿತ್ತು.

ರಂತೆ ಏರ್ಪಡಿಸಿ ಇದನ್ನು ಒಂದು ಜನಾಂಗವನ್ನಾಗಿ ಉಳಿಸಿಕೊಟ್ಟ ಕೀರ್ತಿ ಧರ್ಮಶಾಸ್ತ್ರಗಳಿಗೆ ಸಲ್ಲುತ್ತದೆ.

೯

ಕಾಲ ಕಾಲಕ್ಕೆ ಉಂಟಾದ ವ್ಯತ್ಯಾಸಗಳು ಹಿಂದಿನ ಸೂತ್ರಗಳಿಗೆ ಹೇಗೆ ಹೊಂದಬಹುದು ಎಂಬದನ್ನು ವ್ಯಾಖ್ಯಾನಕಾರರೂ ನಿಬಂಧನೆಗಳನ್ನು ಬರೆದವರೂ ತೋರಿಸಿದ್ದಾರಲ್ಲವೆ? ಇದನ್ನು ನೋಡಿದರೆ ಆಚಾರ ವ್ಯವಹಾರಗಳಲ್ಲಿ ಕಾಲ ಕಾಲಕ್ಕೆ ಜನದ ಮನಸ್ಸಿನಲ್ಲಿಯೇ ವ್ಯತ್ಯಾಸಗಳೂ, ಆಯಾ ಸಂದರ್ಭಕ್ಕೆ ತಕ್ಕಂತೆ ಧರ್ಮದ ಆಚರಣೆ ಹೆಚ್ಚು ಸ್ಪಷ್ಟಗೊಳ್ಳುವುದೂ ರೂಢಿಯಾಯಿತು. ಬೌದ್ಧರೂ, ಜೈನರೂ ಆದ ರಾಜರು ತಮಗಾಗಿ ಕೆಲವು ಅಂಶಗಳನ್ನು ಈ ಧರ್ಮ ಸಂಪ್ರದಾಯಕ್ಕೆ ಸೇರಿಸಿದರು. ಕೆಲವನ್ನು ತಡೆಗಟ್ಟಿದರು. ಬೇರೆ ಧರ್ಮದವರ ಕಾಟದಿಂದಲೋ ದುಷ್ಟರ ಸಾಹಸದಿಂದಲೋ ಮತಾಂತರ ಮಾಡುವವರ ಕಾರ್ಯಜಾಲದಿಂದಲೋ ಧರ್ಮವೂ ಮಾನವೂ ಕೆಟ್ಟ ಸಂದರ್ಭಗಳು ಎಷ್ಟೋ ಒದಗಿವೆ. ಅಂಥ ಪ್ರಸಂಗಗಳಲ್ಲಿ ಸಮಾಜದ ಹಿರಿಯರೂ ರಾಜರೂ ಸೇರಿ ನೆರವಿಗೆ ಬಂದ ಅನೇಕ ನಿದರ್ಶನಗಳಿವೆ. ಅರಿಯದೆ, ಇಷ್ಟವಿಲ್ಲದೆ ಬಲವಂತದಿಂದ ಧರ್ಮಭ್ರಷ್ಟರಾದವರನ್ನು, ಹಾಗೇ ಬಲಾತ್ಕಾರದಿಂದ ಕೆಟ್ಟ ಹೆಂಗಸನ್ನು ಉಳಿಸುವ ಮತ್ತು ಹಿಂದಕ್ಕೆ ತೆಗೆದುಕೊಳ್ಳುವ ಅವಕಾಶಗಳನ್ನು ಅವರು ಕಲ್ಪಿಸಿದರು. ಪರದೇಶ, ಪರಧರ್ಮಗಳವರು ಇಲ್ಲಿ ಬಂದು ನೆಲಸಿ, ಈ ಪದ್ಧತಿ ಸಂಪ್ರದಾಯಗಳನ್ನು ಒಪ್ಪಿ ನಡಸಿಕೊಂಡರೆ ಅವರನ್ನು ಒಳಕ್ಕೆ ಸೇರಿಸಿಕೊಂಡರು. ಶಾಸ್ತ್ರಗಳಿಗೆ ವ್ಯಾಖ್ಯಾನಮಾಡುವಾಗಲೂ, ಅರ್ಥ ವಿವರಣೆಮಾಡುವಾಗಲೂ, ಬರಿಯ ಶಾಸ್ತ್ರದ ಮಾತಿಗಾಗಿ ಕಚ್ಚಾಡದೆ ಅದರ ಹೃದಯವನ್ನು ಹಿಡಿದು ಯುಕ್ತಿ

ಯಿಂದ ಪ್ರಯೋಗವನ್ನು ಕಂಡುಕೊಳ್ಳಬೇಕೆಂದು ಸಾರಿದರು. ಹೀಗೆ
ಧರ್ಮಸಂಪ್ರದಾಯ ಬೆಳೆದು ಬಂದಿತು. ಉದಾರವಾಯಿತು. ವ್ಯಕ್ತಿ
ಸ್ವಂತ ಜೀವನಕ್ಕೆ ಸಂಬಂಧಿಸಿದ ವಿಚಾರಗಳು ಹಾಗಿರಲಿ. ಮದ
ಗಂಡ-ಹೆಂಡಿರ ಸಂಬಂಧ, ಒಬ್ಬರ ಮೇಲೆ ಒಬ್ಬರಿಗಿರುವ ಅಧಿಕ
ಗಂಡು-ಹೆಣ್ಣು ಒಂದಕ್ಕಿಂತ ಹೆಚ್ಚು ಮದುವೆ ಮಾಡಿಕೊಳ್ಳಬಹುದೆ ಎ
ಸಂಗತಿ, ದಾಂಪತ್ಯವಿಚ್ಛೇದ ಅಥವಾ ಮೋಕ್ಷ ಉಂಟೆ ಎಂಬುದು, ಮ
ಮತ್ತು ಅವರ ಪೋಷಣೆ, ಆಸ್ತಿಯ ಹಕ್ಕುಗಳು ಭಾಗಾಂಶ, ವರ್ಣಗಳ
ಪರಸ್ಪರ ಬಾಂಧವ್ಯ, ರಾಜಧರ್ಮ, ನಾಲ್ಕು ಪುರುಷಾರ್ಥಗಳನ್ನು ವ
ಗಳೂ ರಾಜರೂ ಸಾಧಿಸುವ ವಿಚಾರ ಈ ಎಲ್ಲಕ್ಕೂ ಹೀಗೆ ೨೦೦—೩
ವರ್ಷಕ್ಕೆ ಮೇಲ್ಪಟ್ಟ ಚರಿತ್ರೆ ಇದೆ. ಈ ಎಲ್ಲ ಸಂಬಂಧದಲ್ಲಿಯೂ ರು
ವಿಧವಿಧವಾಗಿ ಬೆಳೆದುಕೊಂಡು ಬಂದು ಇಂದಿನ ಸ್ಥಿತಿಗೆ ಮುಟ್ಟಿ
ಈಚೆಗೆ ನೂರಾರು ವರ್ಷಗಳಿಂದ ಈ ಸ್ಥಿತಿ ನಿಂತನೀರಿನ ಸ್ಥಿತಿಯ
ಹೊಸ ಬೆಳವಣಿಗೆಗೆ ನೇರವಾಗಿ ಅವಕಾಶ ದೊರೆಯದಂತಾಗಿದೆ.

ಇವೊತ್ತಿನ ಪ್ರಪಂಚದಲ್ಲಿ ಹಿಂದೆ ಎಂದೂ ಇಲ್ಲದಿದ್ದ ಕಷ್ಟಗಳ
ತೊಡಕುಗಳೂ, ಬದುಕಿನ ರೀತಿಗಳೂ, ಅಗತ್ಯಗಳೂ, ಆಶೆ ಆಕಾಂಕ್ಷೆಗಳ
ಸಂಪರ್ಕಗಳೂ ಉಂಟಾಗಿರುವ ಅಂಶ ಎಲ್ಲರ ಅನುಭವಕ್ಕೂ ಬಂ
ಬೇಕು. ಬೇರೆ ಬಗೆಯ ಧರ್ಮಸಂಪ್ರದಾಯಗಳು ದೇಶದೊಳಕ್ಕೆ ಕ
ಟ್ಟಿವೆ. ಅವುಗಳ ಮೋಹ ಕೆಲವರ ಕಣ್ಣನ್ನೂ ಮನಸ್ಸನ್ನೂ ಸೆಳೆಯುತ್ತಿ
ಸ್ಮೃತಿಶಾಸ್ತ್ರಗಳ ಜೊತೆಗೆ ರಾಜರೂ ಜನಗಳ ಪ್ರತಿನಿಧಿಗಳೂ ಶಾಸ
ಕಾನೂನುಗಳನ್ನು ನಿರ್ಮಾಣ ಮಾಡಬಲ್ಲವರಾಗಿದ್ದಾರೆ. ಬಹುಮತದಿ
ನಡಸುವ ಕಾನೂನುಗಳು ಹುಟ್ಟಿಕೊಳ್ಳುತ್ತ ಹಿಂದಿನ ಸಂಪ್ರದಾಯಗಳನ
ಬಹುಮಟ್ಟಿಗೆ ರೂಪಾಂತರಗೊಳಿಸುತ್ತ ಇವೆ. ಕೆಲವು ಆಚಾರಗಳು ನಿ
ಬೇಕು. ನಮ್ಮಲ್ಲಿ ಈವರೆಗೆ ಇಲ್ಲದ ಕೆಲವು ಹೊಸವನ್ನು ತಂದುಕೊ
ಬೇಕು. ಕೆಲವನ್ನು ಸ್ವಲ್ಪ ಮಾರ್ಪಡಿಸಬೇಕು. ಹೊಸ ಕಾಲದ ಅಗ

ಗಳಿಗೆ ತಕ್ಕಂತೆ ಇವುಗಳನ್ನು ತಿರುಗಿಸಿಕೊಂಡ ಹೊರತು ಇಂದಿನ ಜೀವನ ಸುಖವಾಗುವುದಿಲ್ಲ. ಹಿಂದಿನ ಶಾಸ್ತ್ರಗಳಿಗೆ ಗೌರವವಾಗಲಿ, ಭಕ್ತಿಯಾಗಲಿ ಉಳಿಯುವುದಿಲ್ಲ. ವ್ಯವಹಾರ ಜೀವನ ಹದಗೆಡುತ್ತದೆ. ಕೆಲವು ಸಂದರ್ಭಗಳಲ್ಲಿ ಅನ್ಯಾಯ, ಹಿಂಸೆ ಉಂಟಾಗುತ್ತದೆ. ಉದಾರವಾದ ಅರ್ಥದಲ್ಲಿ ಆಚಾರವನ್ನು ಹಿಗ್ಗಿಸಿದ ಹೊರತು, ಮಾರ್ಪಡಿಸಿದ ಹೊರತು, ಸಂಪ್ರದಾಯ ದುರ್ಬಲವಾಗಿ ಮೂಲೆಗೆ ಬೀಳಬೇಕಾದೀತು. ದೇಶದ ಯೋಗಕ್ಷೇಮವನ್ನು ಕುರಿತು ಚಿಂತಿಸುವ ಮತ್ತು ಅದನ್ನು ಸಾಧಿಸಬೇಕೆನ್ನುವವರ ಮನಸ್ಸೂ ಕಾರ್ಯಗಳೂ ಈ ಕಡೆಗೆ ತಿರುಗುವುದು ಅಗತ್ಯ. ಈ ಮಾರ್ಪಾಡುಗಳನ್ನು ವಿಶಾಲ ದೃಷ್ಟಿಯಿಂದ ಉಂಟುಮಾಡಿಕೊಂಡು ಹಿಂದೂ ಸಮಾಜವನ್ನು ಕಾಪಾಡಿಕೊಳ್ಳದಿದ್ದರೆ ಈ ಜನಾಂಗ ಒಡೆದುಹೋಗುತ್ತದೆ. ಇದರ ಧಾತು, ಕೀರ್ತಿ ಕೆಡುತ್ತದೆ. ಇದರಿಂದ ಪ್ರಯೋಜನ ಇಲ್ಲವಾಗುತ್ತದೆ. ಒಂದು ಕಾಲದಲ್ಲಿ ಧರ್ಮದ ಮೂಲಾರ್ಥಕ್ಕೆ ಭಂಗಬಾರದಂತೆ ರಾಜಶಾಸನಗಳು ಹುಟ್ಟಬಹುದೆಂದು ಅವಕಾಶಕೊಟ್ಟಿದ್ದರು. ಅದೇ ಅವಕಾಶವನ್ನು ರಾಜರೂ ಜನರ ಮುಖಂಡರೂ, ಮತಧರ್ಮಗಳನ್ನು ಕಾಪಾಡುವ ಗುರುಮನೆಗಳವರೂ, ಮಠಗಳವರೂ ಇಂದೂ ಬಳಸಿಕೊಂಡು ಹಿಂದೂ ಜನದ ಲೋಕಜೀವನವನ್ನು ಹೆಚ್ಚು ವೀರ್ಯವತ್ತಾಗಿ ಮಾಡಬೇಕಾಗಿದೆ.

# ಕಾನೂನು

ಮನೆ, ಹಳ್ಳಿ, ಜಿಲ್ಲೆ, ಪ್ರಾಂತ, ದೇಶ — ಇವು ಸಾಮಾನ್ಯವಾಗಿ ಜನ ವಾಸಮಾಡುವ ಪ್ರದೇಶಗಳು. ಮನೆಗೆ ಒಬ್ಬ ಯಜಮಾನ ರಿರುವನು. ಹಾಗೆಯೇ ಹಳ್ಳಿಗೂ, ಜಿಲ್ಲೆಗೂ ದೇಶಕ್ಕೂ ಯಜಮಾನ ರಿರುವುದು ರೂಢಿ. ಒಂದು ಜನ ತಾನೊಂದು ಜನಮಂಡಲವೆಂದು ಅರಿತು ಒಪ್ಪಿ ಯಾವುದೋ ಒಂದು ಗೊತ್ತಾದ ರೀತಿಯಲ್ಲಿ ತಮ್ಮ ಒಟ್ಟು ಜೀವನ ನಡಸುತ್ತೇವೆಂದು ಒಪ್ಪಿಕೊಂಡುದಕ್ಕೆ ಗುರುತು ಇದು. ಅದೇ ರಾಜ್ಯಾಧಿ ಕಾರಕ್ಕೆ ಮೂಲಪ್ರಮಾಣ. ಅದೇ ಎಲ್ಲಾ ಹಕ್ಕುಬಾಧ್ಯತೆಗಳ ನೆಲಗಟ್ಟು ; ಚಿಲುಮೆ. ಈ ಸಂಬಂಧದಲ್ಲಿ ಯಾವುದಾದರೂ ಒಡಂಬಡಿಕೆ ಇರಬಹುದು, ಇಲ್ಲದಿರಬಹುದು ; ಅರ್ಥ ಇದು. ಸ್ವತಂತ್ರವಾದ ಎಲ್ಲ ದೇಶಗಳಲ್ಲಿಯೂ ಒಳ ಆಡಳಿತಕ್ಕೆ ಒಬ್ಬರು ಗೊತ್ತಾದ ಯಜಮಾನರಿರುತ್ತಾರೆ. ಅಂಥವ ರನ್ನು ಇಲ್ಲಿ ರಾಜರೆಂದು ಕರೆಯುತ್ತದೆ. ಅವರು ವಂಶಪಾರಂಪರ್ಯದಲ್ಲಿ ಆಳುವವರಾಗಿರಬಹುದು ; ಅಥವಾ, ಜನ ಆರಿಸುವ ಪ್ರಜಾಧಿಪತಿ ಗಳಾಗಿರಬಹುದು. ಆ ದೇಶದೊಳಗಿನ ಎಲ್ಲ ಕೆಲಸಕಾರ್ಯಗಳೂ, ಅವರ ಕಡೆಯ ಒಪ್ಪಿಕೆಗೂ ಅಂಕೆಗೂ ಒಳಪಟ್ಟಿರುತ್ತವೆ. ಅವರು ಒಪ್ಪದ ಯಾವ ಕಾರ್ಯವೂ ಅಲ್ಲಿ ನ್ಯಾಯವಾಗದು. ಅವರು ನೇರವಾಗಿಯೋ, ಬೇರೆಯಾಗಿಯೋ ಏರ್ಪಡಿಸುವ ಕಟ್ಟುಪಾಡನ್ನು ಯಾರೂ ಮೀರ ಕೂಡದು; ಮುರಿಯ ಕೂಡದು. ಮುರಿದರೆ ಶಿಕ್ಷೆಯಾಗುತ್ತದೆ. ಕಟ್ಟುಪಾಡು ಯಾವುವು ? ಮುರಿದರೆ ಯಾವ ಶಿಕ್ಷೆ ? ಎಂಬುದು ಗೊತ್ತಾಗಿ ಪ್ರಕಟವಾಗಿರು ವುದು. ಆ ದೇಶದ ಜನ ಆಡುವ ಮಾತಿನಲ್ಲಿ, ಅವರಿಗೆ ತಿಳಿಯುವ ರೀತಿ ಯಲ್ಲಿ ಪ್ರಕಟವಾಗುತ್ತವೆ. "ಇಂಥ ಕಟ್ಟುಪಾಡು ಇವೆ ಎಂದು ನಾವರಿ ಯೆವು; ಆದುದರಿಂದ ತಪ್ಪಾಯಿತು" ಎಂದು ಯಾರೂ ಹೇಳಿ ತಪ್ಪಿಸಿ

ಕೊಳ್ಳುವ ಹಾಗಿಲ್ಲ. ದೇಶದ ರಕ್ಷಣೆಯ ಅಧಿಕಾರಿಗಳು ಅವರನ್ನು ದಂಡ
ಗುರಿಮಾಡುತ್ತಾರೆ. ನ್ಯಾಯವನ್ನು ತೀರ್ಮಾನಮಾಡುವ ನ್ಯಾಯಸ
ಗಳಲ್ಲಿ ನ್ಯಾಯಾಧಿಕಾರಿಗಳು ಅವರನ್ನು ವಿಚಾರಣೆ ಮಾಡಿ ತಪ್ಪ
ಒಪ್ಪನ್ನೂ ನಿರ್ಣಯಿಸುತ್ತಾರೆ. ಅವರ ಮೇಲೆ ತಪ್ಪು ಹೊರದಿದ್ದರೆ ಬ
ಗಡೆ ಮಾಡುತ್ತಾರೆ. ತಪ್ಪುಹೊತ್ತರೆ ಶಿಕ್ಷೆಯಾಗುತ್ತದೆ.

ರಾಜನು ಒಳಗಿನ ಎಲ್ಲ ಜೀವನಕ್ಕೂ ಮೇಲ್ಪಟ್ಟ ಅಧಿಕಾರಿ. ಆ
ಮಾತಿಗೆ ಸಾಮಾನ್ಯವಾಗಿ ದೇಶದವರೆಲ್ಲ ಮನ್ನಣೆಕೊಡುತ್ತಾರೆ. ಏಕೆಂ
ಯಾವುದೋ ಒಂದು ನೇಮವನ್ನು ಅನುಸರಿಸಿ ಆತನು ದೇಶಕ್ಕೆ
ಕಾರಿ. ಜನವೆಲ್ಲಾ ಆ ನೇಮವನ್ನೂ, ಆ ಅಧಿಕಾರಿಯನ್ನೂ, ಆ
ಅಧಿಕಾರದ ರೀತಿಯನ್ನೂ ಒಪ್ಪುವ ವರೆಗೂ ಆತನು ದೇಶದಲ್ಲಿ ಬಳಸ
ಕಟ್ಟುಪಾಡುಗಳಿಗೆ ಬಾಗುತ್ತಾರೆ. ಆ ವರೆಗೂ ಆತನು ಅವರ ರ
ನಾಗಿರಬಹುದು.

ಆತನ ಹೆಸರಿನಲ್ಲಿಯೇ ಎಲ್ಲ ನಿಯಮ ಶಾಸನ ಇರುವುದು ; ಹೊರ
ವುದು. ಶಾಂತಿ ಕಾಲದಲ್ಲಿ ಆತನದೇ ಆಳಿಕೆ. ತಮ್ಮ ಎಲ್ಲ ಲೌಕಿಕ ಜೀವನಕ
ಆತನೇ ಹಿರಿಯ. ಆತನ ಮಾತು ಅವರೆಲ್ಲರ ಮಾತು. ಆತನ ನಡತೆ ಅ
ಲ್ಲರ ನಡತೆ. ಆತನ ಬದುಕು ಅವರೆಲ್ಲರಿಗಾಗಿ. ಈ ದೇಶಕ್ಕೂ ಇನ್ನೊಂದಕ
ನಡೆಯುವ ವ್ಯವಹಾರಗಳಲ್ಲಿ ಆತನೇ ಅವರ ಪ್ರತಿನಿಧಿ. ಆತನು ಆ ದೇ
ಎಲ್ಲ ಧರ್ಮದ ಪರಮಾಧಿಕಾರಿ. ಆತನು ತೀರ್ಮಾನ ಮಾಡಿದರೆ, ಸಂಬ
ಗಳನ್ನು ಬೆಳಸಿದರೆ, ಒಪ್ಪಂದಗಳನ್ನು ಮಾಡಿಕೊಂಡರೆ ಇವರು ಬ
ನಡೆಯುತ್ತಾರೆ. ಯುದ್ಧಸಮಯದಲ್ಲಿ ಆತನೇ ಇವರ ಮಹಾ ಸೇನಾ
ದೇಶದ ಎಲ್ಲ ರಾಜಕಾರ್ಯವೂ ಆತನ ಹೆಸರಿನಲ್ಲಿಯೇ ನಡೆವುದು.
ಅಧಿಕಾರಿಗಳ ಉದ್ಯೋಗ ಹುದ್ದೆಗಳನ್ನು ಗೊತ್ತುಮಾಡುವವನೂ ಆತನ
ಇದೇ ಸಂಕೇತ ; ಸಂಪ್ರದಾಯ.

೨

ರಾಜನೇ ರಾಷ್ಟ್ರಕ್ಕೆ ಕಾರಣ ಎನ್ನುವರು. ಈ ಮಾತಿನಲ್ಲಿ ಈ ಅರ್ಥದ ಜೊತೆಗೆ ಇನ್ನೊಂದರ್ಥ ಸೇರಿದೆ. ಈ ಯಜಮಾನನು ಎಷ್ಟು ಹಿರಿಯ ಮನಸ್ಸಿನವನಾದರೆ ಅವನ ನಾಡಿನ ಬದುಕು ಅಷ್ಟು ಹಿರಿಯದಾಗ ಬಲ್ಲುದು. ದೇಶದ ಯೋಗಕ್ಷೇಮವೆಲ್ಲ ಆತನ ಅಧೀನಕ್ಕೆ ಒಳಪಟ್ಟಿರುವಾಗ, ಆತನಿಗೆ ಸರಿತೋರಿದಂತೆ ಎಲ್ಲವನ್ನೂ ನಡಸಿ ಆಳಬಹುದು. ದೇಶದ ಹಿತ ಆತನ ವಶ. ಅವನು ಬೆಳಸಿದರೆ ಶಾಂತಿ, ಸಂಪತ್ತು, ಸುರಕ್ಷಣೆ, ಸಂತೋಷ, ನ್ಯಾಯ ಬೆಳೆಯುವುವು. ಅವನು ನ್ಯಾಯದ ಮತ್ತು ಸ್ವಾತಂತ್ರ್ಯದ ಆವರಣ ವನ್ನು ಕಟ್ಟಿ ಬೆಳಸಿದರೆ, ನ್ಯಾಯ ಸ್ವಾತಂತ್ರ್ಯ ಬೆಳೆದಾವು. ಆತನಲ್ಲಿ ವಿಚಕ್ಷಣೆ ಇದ್ದರೆ, ದೂರದೃಷ್ಟಿ ಇದ್ದರೆ, ದೇಶದಲ್ಲಿ ವಿಚಕ್ಷಣೆ, ದೂರದೃಷ್ಟಿ ನೆಲಸು ವುವು. ಆತನು ಸತ್ಯವಂತನಾಗಿಯೂ, ಧರ್ಮಿಷ್ಠನಾಗಿಯೂ, ಶುಚಿಶೀಲ ನಾಗಿಯೂ ಇದ್ದರೆ ದೇಶದಲ್ಲಿ ಸತ್ಯ, ನ್ಯಾಯ, ಧರ್ಮ ಶುಚಿ ಹರಡಬಲ್ಲವು. ಎಲ್ಲವನ್ನೂ ಕಾಪಾಡುವ ಕೆಲಸ, ಬೆಳಸುವ ಕೆಲಸ ಹೀಗೆ ಆತನಿಗೆ ಸಂಬಂಧ ಪಡುತ್ತದೆ. ಆದುದರಿಂದ ರಾಷ್ಟ್ರದ ಎಲ್ಲ ಬಗೆಯ ಕ್ಷೇಮವೂ ಲಾಭವೂ ಆತನನ್ನೇ ಹೊಂದಿವೆ. ಇವನ್ನು ಸಾಧಿಸುವ ಹೊಣೆ ಆತನದು. ವಿಶ್ರಾಂತಿ ಯಿಲ್ಲದೆ ಈ ಪ್ರಜಾಪಾಲನೆಯನ್ನು ಆತನು ಮಾಡಬೇಕು. ತನ್ನ ಸುಖ ಸೌಕರ್ಯಗಳ ಎಣಿಕೆ ಸಲ್ಲವು. ಆತನೂ ಆತನ ಅಧಿಕಾರಿಗಳೂ ಪ್ರಜಾವತ್ಸ ಲರೂ, ಪ್ರಜೆಯೆಂಬ ದೈವದ ಭಕ್ತರೂ, ಪ್ರಜಾಸೇವಕರೂ ಆಗಿರಬೇಕು. ಆದ್ದರಿಂದಲೇ ರಾಜ್ಯಾಧಿಕಾರಿವರ್ಗಕ್ಕೆ ಪಬ್ಲಿಕ್ ಸರ್ವಿಸ್—ಸಾರ್ವಜನಿಕ ಸೇವಕವರ್ಗ—ಎನ್ನುವುದು. ರಾಜನು ಈ ವರ್ಗದವರ ಮೊದಲಿಗ; ನಾಯಕ, ಹಿರಿಯ, ಮೊದಲ ಸೇವಕ.

ಎಲ್ಲ ರಾಜಕಾರ್ಯವನ್ನೂ ಆತನೇ ಮಾಡಲು ಆಗುವುದಿಲ್ಲ. ಆತನ ಸಹಾಯಕ್ಕೆ ಅನೇಕರನ್ನು ಆತನು ನೇಮಿಸಿಕೊಳ್ಳಬೇಕು. ಅವರ ನೆರವಿಂದ ಕಾರ್ಯಗಳು ನಡೆಯಬೇಕು. ಈ ಸಹಾಯಕರು ಆತನು ನೇಮಿಸುವ

ಅಧಿಕಾರಮಂಡಲ. ಇವೆರಡೂ ಸೇರಿದರೆ ಇದಕ್ಕೆ 'ಸರಕಾರ' ವೆಂ
ಹೆಸರು. ಸರಕಾರವು ಹೀಗೆ ರಾಜ್ಯದ ಕಾರ್ಯವನ್ನು ನಡಸುವ ಒಂ
ಯಂತ್ರಸಾಧನ. ಒಂದು ಬಗೆಯ ಯಂತ್ರಸಾಧನದಿಂದ ದೇಶದ
ಸಾಧಿತವಾಗದಿದ್ದರೆ ಇನ್ನೊಂದನ್ನು ಏರ್ಪಡಿಸುವ ಅಧಿಕಾರವು ರಾಜ
ಇರುತ್ತದೆ; ಈ ರಾಜನನ್ನು ಒಪ್ಪುವ ಜನಗಳಿಗಿರುತ್ತದೆ. ಜನಕ್ಕೆ ಒಪ್ಪ
ರಾಜನಾಗಲಿ ಮಹಾಧಿಕಾರಿಯಾಗಲಿ ದೇಶವನ್ನು ಆಳುವುದು ಬಹುಕಾ
ಶಕ್ಯವಾಗುವುದಿಲ್ಲ. ಹಾಗೆಯೇ ಜನಕ್ಕೆ ವಿರೋಧವಾದ ಯಾವ ಸರ
ರವೂ ಬಹುಕಾಲ ಜನವನ್ನು ಆಳಲಾರದು. ವಿವೇಕಶಾಲಿಯಾದ ಯಾ
ಸರಕಾರವೂ ಜನವನ್ನು ವಿರೋಧ ಮಾಡಿಕೊಳ್ಳದು. ಅಷ್ಟುಮಾತ್ರವಲ್ಲ
ವಿರೋಧ ಮಾಡಿಕೊಂಡ ಸರಕಾರ ತನ್ನ ಉದ್ಯೋಗಕ್ಕೆ ಅನರ್ಹವಾದಂ
ಜನದ ಕೆಲಸಕ್ಕಿಂತ ತನ್ನ ಪ್ರತಿಷ್ಠೆಗೂ, ತನ್ನ ಅಧಿಕಾರಕ್ಕೂ ಅದು ಹೆಚ
ಬೆಲೆ ಕೊಡುತ್ತದೆ ಎಂದು ಅರ್ಥವಾಗುತ್ತದೆ.

ಜನವರ್ಗಕ್ಕೂ, ಸರಕಾರದ ಆಡಳಿತಕ್ಕೂ ಸಂಬಂಧಪಟ್ಟಂತೆ ಅನೇ
ಬಗೆಯ ಶಾಸನಗಳು ಪ್ರತಿಯೊಂದು ದೇಶದಲ್ಲಿಯೂ ಏರ್ಪಟ್ಟಿರುವು
ಎಲ್ಲಿ ರಾಜನೂ, ಅಧಿಕಾರಿಗಳೂ ನಿರಂಕುಶರಲ್ಲದೆ ಇರುತ್ತಾರೋ ; ಎ
ಜನದ ಅಭಿಪ್ರಾಯಕ್ಕೆ ತಕ್ಕಂತೆ ರಾಜಕಾರ್ಯಗಳೂ ಸರಕಾರದ ಅಧಿಕಾರ
ನಡೆಯುತ್ತವೆಯೋ ಅಂಥ ದೇಶಗಳಲ್ಲಿ ಶಾಸನಗಳು ಉತ್ತಮವಾಗಿ
ತ್ತವೆ. ಜನ, ರಾಜ, ಸರಕಾರ ಇವರ ಪರಸ್ಪರ ಸಂಬಂಧಗಳ ನಿರ್ಣ
ಮಾಡಲು ಬಗೆ ಬಗೆಯ ನಯಗಳೂ, ನಿಯಮಗಳೂ, ನಿರ್ಣಯ ಪದ್ಧ
ಗಳೂ, ಏರ್ಪಟ್ಟಿರುತ್ತವೆ. ಎಷ್ಟೇ ಬುದ್ಧಿವಂತನಾಗಲಿ, ಶಕ್ತನಾಗಲ
ನಿಪುಣನಾಗಲಿ ಒಂದು ದೇಶದ ಮೇಲೆ ಮಿತಿಯಿಲ್ಲದ ಅಧಿಕಾರವನ
ಒಬ್ಬನಿಗೆ ಕೊಟ್ಟರೆ ಅದರಿಂದ ಆಳಿಕೆ ಹದ ತಪ್ಪಬಲ್ಲುದು ಎಂದ
ಪ್ರಪಂಚಕ್ಕೆ ತಿಳಿದಿದೆ. ಎಂಥವನ ಬುದ್ಧಿಗೂ, ಭ್ರಾಂತಿ, ಮರಹು, ಆಲಸ್
ಉಂಟಾಗಬಲ್ಲವು. ಅವನ ವಿಶ್ವಾಸ ಕೆಲವಕ್ಕೆ ಸಿಕ್ಕದೆ ಹೋಗಬಹುದು

ಳಿದೋ ತಿಳಿಯದೆಯೋ ಆತನು ತಪ್ಪಿ ನಡೆಯಬಹುದು. ಅದರಿಂದ ಜನತೆಗೆ ಕೇಡು. ಅಂತಹ ಅವಕಾಶವಿಲ್ಲದಂತೆ ರಾಜ್ಯಶಾಸನಗಳು ಏರ್ಪಡಿಸುವುವು. ರಾಜನೂ ಹೀಗೆಯೇ ಒಟ್ಟಿನಲ್ಲಿ ದೇಶದ ಶಾಸನ ಪದ್ಧತಿಗೆ ಒಳಪಟ್ಟು ನಡೆಯುವುದು ಮೇಲು. ಮುಂದುವರಿದ ಅನೇಕ ದೇಶಗಳಲ್ಲಿ ಈ ಸೂತ್ರ ಬಳಕೆಯಲ್ಲಿದೆ.*

ಇಷ್ಟೆಲ್ಲ ಹೇಳಿದುದಕ್ಕೆ ಕಾರಣ ಇದು : ಉತ್ತಮ ನಾಗರಿಕತೆಯನ್ನು ಪಡೆದಿರುವ ಎಲ್ಲ ದೇಶಗಳಲ್ಲಿಯೂ ಒಂದು ಸರಕಾರ ವ್ಯವಸ್ಥೆ ಇರುತ್ತದೆ. ಅದಕ್ಕೆ ಒಬ್ಬ ಮೇಲಧಿಕಾರಿ ಇರುತ್ತಾನೆ. ಜನ ಆತನು ನಡಸುವ ಧರ್ಮವನ್ನು ಒಪ್ಪುವವರೆಗೂ ಆತನು ಆ ದೇಶವನ್ನು ಆಳುತ್ತಾನೆ. ಆತನೂ, ಆತನ ಸಹಾಯಕ ಅಧಿಕಾರಿಗಳೂ ಏರ್ಪಡಿಸುವ ಕಟ್ಟುಪಾಡು, ಕಾಯಿದೆ, ಕಾನೂನು ಜನದಲ್ಲಿ ಬಳಕೆಯಲ್ಲಿರುತ್ತವೆ. ಅವನ್ನು ಜನವೆಲ್ಲಾ ಅನುಸಿರಿಸಿಯೇ ತೀರಬೇಕು. ಒಟ್ಟು ಈ ಎಲ್ಲವನ್ನು ದೇಶದ ಕಾನೂನು ಎನ್ನಬಹುದು. ಈ ಸಂಗತಿಯನ್ನು ಸೂಚಿಸುವುದಷ್ಟೇ ಇಲ್ಲಿ ಉದ್ದೇಶ. ಯಾವ ದೇಶದಲ್ಲಿ ಕಾನೂನು ಚೆನ್ನಾಗಿರುವುದೋ ಅಲ್ಲಿ ಜನದ ಬೆಳವಣಿಗೆ

---

* ಕಾನೂನು ಪೂರ್ತಿ ರಾಜಕೀಯ ಜೀವನಕ್ಕೆ ಸಂಬಂಧಿಸಿದ್ದು. ಆದ್ದರಿಂದ ಪ್ರಜಾಸಂಬಂಧವೆಲ್ಲ ಇಲ್ಲಿ ಎಣಿಕೆಗೆ ಬರಬೇಕಾಗುತ್ತದೆ. ಈ ಸಂಗತಿ ವಿಚಿತ್ರವಾಗಿ ಕಂಡೀತು ; ಆದರೆ ನಿಜ. ಒಂದು ಕಡೆ ರಾಜನೇ ಎಲ್ಲ ಶಾಸನಗಳಿಗೂ ಮೂಲ. ಆತನಿಂದಲೇ ಶಾಸನಗಳ ಉತ್ಪತ್ತಿ. ಆತನು ಜನದ ಧ್ವನಿ, ಕಣ್ಣು, ಕೈ, ಉಸಿರು. ಆತನ ಹೆಸರಿನಲ್ಲಿಯೇ ಎಲ್ಲ ನ್ಯಾಯ, ವ್ಯವಹಾರ, ಆಡಳಿತ ನಡೆಯುವುದು. ಸಾಮಾನ್ಯ ಶಾಸನಗಳು ಯಾವುವೂ ಆತನನ್ನು ನಿರ್ಬಂಧಿಸವು. ಎಲ್ಲಿಯ ವರೆಗೂ ಆತನು ನಿರ್ವಂಚನೆಯಿಂದ ದೇಶದ ಕಟ್ಟುಪಾಡುಗಳನ್ನು ನಡಸುತ್ತಾನೋ ಅಲ್ಲಿನ ವರೆಗೂ ಹಾಗೇ. ಅವುಗಳನ್ನೆಲ್ಲ ಸ್ವಂತ ಲಾಭ ಸ್ವಂತ ಅನುಕೂಲಕ್ಕೋ, ಅಥವಾ, ತನ್ನವರ ಅಥವಾ ಇನ್ನಾರಾದರೂ ಕೆಲವು ಮಾತ್ರರ ಲಾಭಕ್ಕೂ, ಪ್ರಯೋಜನಕ್ಕೋ ಬಳಸಿಕೊಂಡು ರಾಜ್ಯ ಜೀವನವನ್ನು ಹದಗೆಡಿಸಿದರೆ ಅಂಥ ರಾಜನು ದೇಶದ ಧರ್ಮವನ್ನು ಮೀರಿದಂತೆ ಆಗುತ್ತದೆ. ರಾಜಧರ್ಮದಿಂದಲೇ ಆತನು ಪತಿತನಾಗುತ್ತಾನೆ. ಇಂಥ ಸ್ಥಿತಿ ಉತ್ಕಟಕ್ಕೆ ಬಂದು ಅನೇಕ ದೇಶಗಳಲ್ಲಿ ಬೇರೆ ಬೇರೆ ಕಾಲಗಳಲ್ಲಿ ರಾಜರು ಜನದ ದಂಡನೆಗೆ ಗುರಿಯಾಗಿರುವುದುಂಟು. ಸ್ಥಾನ, ಮಾನ, ಜೀವ ಕಳೆದುಕೊಂಡಿರುವುದುಂಟು.

ಚೆನ್ನಾಗಿರುವುದು. ಅವರ ಸ್ವಾತಂತ್ರ್ಯ ಬೆಳೆಯುವುದು. ಅವರು
ಯೊಬ್ಬರೂ ದೇಹಶಕ್ತಿ, ಬುದ್ಧಿಶಕ್ತಿ ಮತ್ತು ಆತ್ಮಶಕ್ತಿಯಲ್ಲಿ ಬೆಳೆಯ
ಶಕ್ಯವಾಗುವುದು. ಆ ದೇಶದಲ್ಲಿ ದಿನಜೀವನ ಸುಖವಾಗಿರುವು
ಪ್ರಜೆಗಳು ಒಂದು ಧರ್ಮದ ಹದಕ್ಕೆ ಒಳಪಟ್ಟು ಧೈರ್ಯವಾಗಿ, ಸ್ವತ
ವಾಗಿ ಯೋಚನೆ ಮಾಡಬಲ್ಲವರಾಗುವರು. ಸರಿ ಎಂದು ತೋರಿದ ರಿ
ಯಲ್ಲಿ ನಡೆಯಬಲ್ಲವರಾಗುವರು. ತಮ್ಮ ಅಭಿಪ್ರಾಯಗಳನ್ನು ಜನತೆಯ
ಹರಡುವುದಕ್ಕೂ, ಅದರ ಮನಸ್ಸನ್ನು ಒಳ್ಳೆಯದರ ಕಡೆ ಎಳೆದು ತಿರ
ಸುವುದಕ್ಕೂ, ತಮಗೆ ಬೇಕಾದ ಸಂಘ, ಸಮಾಜ, ಸಭೆಗಳನ್ನು ನಿರ್ಮಾ
ಮಾಡುವುದಕ್ಕೂ ಶಕ್ತರಾಗುವರು. ತಮ್ಮ ಮತದಂತೆ ದೇವಕಾರ್ಯ
ಗಳನ್ನು ಮಾಡಿಕೊಳ್ಳಲಾಗುವುದು, ಅಗತ್ಯವಾದುವನ್ನು ಕೊಳ್ಳಬಹುದ
ಮಾರಬಹುದು, ದಾನಮಾಡಬಹುದು, ಬೇಕಾದ ಕಡೆ ಹೋಗಿಬರು
ಅವಕಾಶವಿರುವುದು. ಲಾಭಕರ ಸುಖ ಎಂದು ತೋರಿದ ಕಸಬು ಉದ್ಯೋ
ಗಳಲ್ಲಿಯೂ ವಿನೋದಗಳಲ್ಲಿಯೂ ತೊಡಗಲು ಅವರಿಗೆ ಅವಕಾಶವಿ
ವುದು. ಜನದ ಏಳಿಗೆಗಾಗಿ ಸರಕಾರದ ಗಮನವನ್ನು ಸೆಳೆಯಬಹುದ
ಯಾವಯಾವ ಬಗೆಯಲ್ಲಿ ನಡೆದರೆ ತಮ್ಮ ಬದುಕು ಸಂತೋಷಗೊಳ
ವುದೋ ಆ ಬಗೆಯಲ್ಲೆಲ್ಲಾ ನಡೆಯಲೂ ಮತ್ತು ಯಾರ, ಯಾವ ಭೀ
ಯೂ ಇಲ್ಲದೆ ಅವುಗಳನ್ನು ಸಾಧಿಸಲೂ ಅವಕಾಶ ಇರುವ ದೇಶಗಳ
ಜನರೆಲ್ಲರ ವ್ಯಕ್ತಿಶಕ್ತಿ ಅರಳುವುದು ; ಬದುಕು ಸಫಲವಾಗುವುದು. ಇದನ್ನು
ಆಗಮಾಡುವುದಕ್ಕೇ ಸರಕಾರ ಇರುವುದು.

ಇಂಥ ಅವಕಾಶ ಸಮವಾಗಿ ಎಲ್ಲರಿಗೂ ದೊರಕಬೇಕು ಮಾತ್ರ
ಯಾರಿಂದಲೂ ಇನ್ನಾರಿಗೂ ಕೇಡು, ಅಡ್ಡಿ, ನಷ್ಟ ಆಗದಿದ್ದರೆ ಆಯಿತು
ಈ ಮಿತಿಯಲ್ಲಿ ಎಲ್ಲರನ್ನೂ ರಕ್ಷಿಸುವ, ಪೋಷಿಸುವ ಅಧಿಕಾರವೂ, ಹೊ
ಗಾರಿಕೆಯೂ ದೇಶದ ಕಾನೂನುಗಳದು. ಎಂದರೆ ಅದು ಆ ಸರಕಾರ
ಮತ್ತು ಅದರ ಮುಖ್ಯಸ್ಥನಾದ ರಾಜನ ಕರ್ತವ್ಯ. ಹೀಗೆ ದೇಶದ ಕೀರ್ತಿ

ಯಲ್ಲಿ ಒಂದು ಕಡೆ ರಾಜನ ಕಾರ್ಯ, ಸರಕಾರದ ಕಾರ್ಯ, ಇದೆ; ಇನ್ನೊಂದು ಕಡೆ ಜನದ ನಡವಳಿಕೆ ಇದೆ. ಎಲ್ಲ ಮುಖವಾದ ಏಳಿಗೆ, ಸೌಭಾಗ್ಯ, ಎಲ್ಲೆಲ್ಲಿಯೂ ಸಮಾಧಾನ, ಸಮರಸ, ಹೊಂದಿಕೆ, ಸುಸೂತ್ರವಾಗಿ ನಡೆಯುವ ವ್ಯವಸ್ಥೆ, ದಿನದಿನವೂ ಹೊಸ ಹೊಸ ಸಂತೋಷಕ್ಕೂ ಮೇಲ್ಮೆಗೂ ನಡೆಯುತ್ತಿರುವ ಮುನ್ನಡೆ—ಇವೇ ಒಳ್ಳೆಯ ರಾಜ್ಯದ ಲಕ್ಷಣ. ಅಲ್ಲಿ ಇನ್ನು ಯಾವ ಭೀತಿಯೂ ಇಲ್ಲ; ಎಲ್ಲ ತೃಪ್ತಿಯೂ ಇರುತ್ತದೆ; ಇದು ನೆರವೇರುವಂತೆ ಆ ದೇಶದ ಕಾನೂನೂ ಶಾಸನ ಪದ್ಧತಿಯೂ ರಚಿತವಾಗಬೇಕು.

ಜನಾಭಿಪ್ರಾಯಕ್ಕೆ ಒಳಪಟ್ಟು ನಡೆಯುವ ಸರಕಾರಗಳು ದೇಶದ ಎಲ್ಲರ ಎಲ್ಲ ಬಗೆಯ ಬೆಳವಣಿಗೆಯನ್ನು ಸಾಧಿಸಬಲ್ಲವು ಎಂಬ ತತ್ವಕ್ಕೆ ರಾಜಕೀಯದಲ್ಲಿ ಮುಂದುವರಿದ ದೇಶಗಳೆಲ್ಲ ಇಂದು ಒಲಿದಿವೆ. ದೇಶದಲ್ಲಿ ಒಬ್ಬಿಬ್ಬರು ಅಥವಾ ನೂರು ಮಂದಿ ಎಲ್ಲ ಶಕ್ತಿಗಳಲ್ಲಿ ಬೆಳೆದು ಕೀರ್ತಿವಂತರಾದರೆ ಸಾಲದು. ಜನತೆಯೆಲ್ಲಕ್ಕೂ ಬೆಳವಣಿಗೆ ಬೇಕು; ಬೆಳೆವ ಸಮಾನವಾದ ಅವಕಾಶ ಬೇಕು. ತಮ್ಮ ಮೇಲ್ಮೆಯನ್ನು ತಾವೇ ಕಂಡು ನಿಶ್ಚಯಿಸಿಕೊಳ್ಳುವ ಶಿಕ್ಷಣವೂ, ಅಭ್ಯಾಸವೂ, ಹೊಣೆಗಾರಿಕೆ ಬುದ್ಧಿಯೂ ಉಂಟಾಗಬೇಕು. ಪ್ರಜಾಧಿಪತ್ಯಗಳಲ್ಲಿ ಈ ಬಗೆಯ ರಾಜಕೀಯ ವಿದ್ಯಾ ಶಿಕ್ಷಣವೂ, ವ್ಯಕ್ತಿ ಸ್ವಾತಂತ್ರ್ಯವೂ, ಆತ್ಮಾವಲಂಬನೆಯೂ ಆಗ ಬೆಳೆವಾವು. ಇತರ ಬಗೆಯ ರಾಜ್ಯಪದ್ಧತಿಗಳಲ್ಲಿ ಇದಕ್ಕೆ ಅವಕಾಶವಿಲ್ಲ. ಒಬ್ಬರ ಅಥವಾ ಕೆಲವರ ಅಧಿಕಾರ ಎಷ್ಟೇ ಒಳ್ಳೆಯದಾಗಿರಲಿ ಪ್ರಜೆಗಳ ಸ್ವರಾಜ್ಯಕ್ಕೆ ಸಮನಲ್ಲ ಎಂದು ಆಡಳಿತವನ್ನು ಪ್ರಜೆಗಳ ಅಭಿಪ್ರಾಯಕ್ಕೆ ಕಟ್ಟುನಿಟ್ಟಾಗಿ ಒಳಪಡಿಸುವ ದಾರಿಗೆ ಇಂದು ಗೌರವ ಉಂಟು. ತತ್ವದಲ್ಲಿಯಾದರೂ ಪ್ರತಿಯೊಬ್ಬರೂ ಸ್ವತಂತ್ರರು, ಸೋದರರು, ಸಮಾನರು ಎಂಬ ಭಾವಕ್ಕೆ ಇಂತಹ ರಾಜ್ಯಗಳಲ್ಲಿ ಮಾತ್ರವೇ ಅವಕಾಶ. ಆದುದರಿಂದ ಅಧಿಕಾರದ ಎಲ್ಲೆ ಮಿತಿಗಳನ್ನು ನಿಷ್ಕರ್ಷೆ ಮಾಡುವ

ಪದ್ಧತಿ ಅಲ್ಲಿ ಕಾಣುತ್ತದೆ.* ಎಂದರೆ ಏನಾಯಿತು ? ರಾಜ್ಯ ಪದ್ಧತಿ
ಹಲವು ಬಗೆಯವು. ಅಧಿಕಾರ ಹಲವು ತೆರನಾಗಿರುತ್ತದೆ. ಮಿತವಾಗಿ
ಅಮಿತವಾಗಿಯೋ ಇರುತ್ತದೆ. ಆಡಳಿತದ ರೀತಿ ಪ್ರಕಾರಗಳು ವಿಧ
ಒಂದು ಜನದ ಸ್ವಭಾವ, ಅವರ ಬದುಕಿನ ರೀತಿ, ಅವರ ದೇಶದ ಚರಿ
ರಾಜಕೀಯ ವಿಚಾರದಲ್ಲಿ ಅವರ ಅಭಿಪ್ರಾಯ, ಅವರ ಧೈರ್ಯ, ನಿಧ
ನಾಲ್ವರು ಒಟ್ಟಿಗೆ ಸೇರಿ ಕೆಲಸ ಮಾಡುವ ಅಭ್ಯಾಸ, ಕ್ರಿಯಾಶ
ಇವುಗಳನ್ನು ಅನುಸರಿಸಿ ಆಯಾ ದೇಶದ ವ್ಯವಹಾರಜೀವನ ಏರ್ಪ
ತ್ತದೆ. ದೇಶದ ಕಾನೂನು ಕಟ್ಟುಪಾಡುಗಳಲ್ಲಿ ಈ ಎಲ್ಲ ಲಕ್ಷಣಗ
ಪ್ರತಿಫಲಿಸಿರುತ್ತವೆ. ಹೀಗೆ ಕಾನೂನು ಎಂಬುದು ಒಂದು ಮುಖ
ಅಧಿಕಾರದ ವಾಣಿ ಮತ್ತು ನ್ಯಾಯ; ಹೀಗಾಗಿ ಅದು ಜನದಿ
ವಿಧೇಯತೆ ಬಯಸುತ್ತದೆ. ಇನ್ನೊಂದು ಮುಖದಲ್ಲಿ ಅದು ಜನದ ಹ
ಸ್ವಾತಂತ್ರ್ಯಗಳ ಕನ್ನಡಿ, ರಕ್ಷಕ, ಸ್ಥಾಪಕ. ರಾಜನ ಅಧಿಕಾರಕ
ಪ್ರಜೆಯ ಸ್ವಾತಂತ್ರ್ಯಕ್ಕೂ ನಡುವೆ ಕಟ್ಟಿದ ಸೇತು ಅದು.

ಯಾವ ಕಟ್ಟುಪಾಡನ್ನು ಯಾರೇ, ಹೇಗೇ ಮಾಡಿರಲಿ ಅ
ಕಾನೂನು ಆಗಿರುವ ವರೆಗೂ ಕಾನೂನೇ. ಅದನ್ನು ಮೀರುವು
ಅಕ್ರಮ. ಅದು ರದ್ದಾಗುವ ವರೆಗೂ ಧರ್ಮವಾಗಲಿ, ಅಧರ್ಮವಾಗ
ಯಾರಿಗೆ ರುಚಿಸಲಿ ರುಚಿಸದಿರಲಿ ಅದರ ಅಧಿಕಾರ ನಡೆಯುತ್ತ
ನಿರಂಕುಶನಾದ ಯಾವನೋ ರಾಜ ಯಾವುದೋ ಒಂದು ಚಪ
ಮನಸ್ಸಿನಲ್ಲಿ ಮಾಡಿದನೆಂದರೆ ಅದು ಕಡಮೆಯಲ್ಲ; ಶಾಸನದ ಸಭೆಗಳ
ನೂರಾರು ಮಂದಿ ಚರ್ಚೆ ಮಾಡಿ ತೀರ್ಮಾನಕ್ಕೆ ಬಂದದ್ದೆಂದರೆ ಹೆಚ್ಚ
ಕಾನೂನು ಕಾನೂನೇ. ಕಾನೂನನ್ನು ಮಾಡುವ ಅಧಿಕಾರ ಅಂಥವರಿ
ಇದ್ದರೆ ಸಾಕು.

---

* ರಾಜಕೀಯ ಸಮಾನತೆ ಸ್ವಾತಂತ್ರ್ಯ ಸಾಲದು. ಆರ್ಥಿಕ ಸಮಾನತೆ, ಸ್ವಾತಂತ್ರ್ಯಗಳ
ಅಗತ್ಯ ಎಂಬುದೂ ಸಿದ್ಧವಾಗಿದೆ.

ಮನೆ, ಕುಲ, ಮಠ, ಗಿರಣಿ, ಕಚೇರಿ, ಸಭೆ, ಸರಕಾರ, ಸೈನ್ಯ, ಮುಂತಾಗಿ ಎಲ್ಲ ಕಡೆಯಲ್ಲಿಯೂ ನಿಯಮ, ನಡತೆಯ ನಿರ್ಬಂಧ ಇರುತ್ತವೆ. ಯಾವುದನ್ನು ಮೀರಿದರೂ ಕಷ್ಟವೇ. ಒಂದಲ್ಲ ಒಂದು ರೀತಿ ಶಿಕ್ಷೆ ಅನುಭವಿಸಬೇಕು. ಆದರೆ ಸಾಮಾನ್ಯವಾಗಿ ಆಯಾ ಸಣ್ಣ ಸಣ್ಣ ಕಾರ್ಯಕ್ಷೇತ್ರಗಳಿಗೇ ಕೆಲವು ನೇಮ ಸಲ್ಲುವುವು. ಅವುಗಳಿಂದ ಪಾರಾಗಿ, ಸುರಕ್ಷಿತವಾಗಿರಬಹುದು. ರಾಜ್ಯಕ್ಕೆಲ್ಲಾ ಅವುಗಳ ಅಧಿಕಾರ ಸಲ್ಲದು. ಅವುಗಳ ಪೀಡೆ ಅನ್ಯಾಯಗಳಿಂದ ರಾಜರಕ್ಷಣೆ ಪಡೆದು ಸುಖವಾಗಿರಬಹುದು. ಆದರೆ ಸರಕಾರ ಮಾಡಿದ ಶಿಸ್ತು ಮಾತ್ರ ಈ ಎಲ್ಲಕ್ಕೂ ಮೇಲೆ. ಸರಕಾರವು ಎಲ್ಲ ಸಂಸ್ಥೆಗಳಿಗೂ ಮೇಲ್ಪಟ್ಟ ಅಧಿಕಾರವುಳ್ಳದ್ದು. ಇತರ ಎಲ್ಲ ಅಧಿಕಾರಗಳನ್ನೂ ಕಡ್ಡಾಯವಾಗಿ ತನಗೆ ಒಳಪಡಿಸಿಕೊಳ್ಳಬಲ್ಲ ಸಂಸ್ಥೆ ಅದು. ಒಂದು ದೇಶದ ಆಡಳಿತಪದ್ಧತಿಗೆ ಒಳಪಟ್ಟಿರಲು ಒಪ್ಪಿಕೊಂಡ ಯಾವ ಪ್ರಜೆಗೇ ಆಗಲಿ ಅದರಿಂದ ಪಾರಾಗಲು ಶಕ್ಯವಿಲ್ಲ. ಅದನ್ನು ಮೀರುವೆನೆಂದರೆ ಸರಕಾರದ ದಂಡಶಕ್ತಿ ಅವನನ್ನು ಹದ್ದಿನಲ್ಲಿಡುವುದು. ಸಮಾಜದ ಒಟ್ಟು ಶಕ್ತಿಯು ರಾಜನ ದಂಡರೂಪದಲ್ಲಿರುತ್ತದೆ.

ಹೀಗೆ ಕಾನೂನಿಗೂ ವ್ಯಕ್ತಿಗೂ ಇರುವ ಸಂಬಂಧ ಒಂದು ನಿರ್ಬಂಧದ್ದು. ಈ ನಿರ್ಬಂಧವನ್ನು ರಾಜ್ಯವೆಲ್ಲದರ ಹಿತದೃಷ್ಟಿಯಿಂದ ರಾಜನೂ, ಆತನ ಸರಕಾರವೂ ವಿಧಿಸಿರಬೇಕೆಂಬುದರಿಂದ ಎಲ್ಲರೂ ವಿಧೇಯರಾಗಿರಲು ಒಪ್ಪುತ್ತಾರೆ ಎಂದರ್ಥ. ಎಲ್ಲರ ಹಿತವನ್ನೂ ಸಾಧಿಸದ ಕಾನೂನಿಗೆ ಜನದ ಮನಸ್ಸು ಒಡಂಬಡದು. ಅದು ಬಹು ಬೇಗ ನಿರ್ವೀರ್ಯವಾಗಿ ಮೂಲೆಗೆ ಬೀಳುತ್ತದೆ. ಜನವರ್ಗವನ್ನು ಒಳಗೂ ಹೊರಗೂ ರಕ್ಷಿಸುವ, ಪೋಷಿಸುವ ಹೊಣೆ, ಅಧಿಕಾರ ರಾಜನದು. ಅದನ್ನು ಅರಿತು ಶಿಸ್ತಿನಿಂದ ನಡೆಯುವುದು ಪ್ರಜೆಯ ಜವಾಬ್ದಾರಿ. ಅಧಿಕಾರಿಯ ಅಧಿಕಾರ ಮಿತಿ ಮೀರಬಾರದು; ಕಟ್ಟು ಪಾಡು ಯಾರೊಬ್ಬರ ಬರಿಯ ದರ್ಪಕ್ಕೂ, ಸ್ವಪ್ರಯೋಜನಕ್ಕೂ ದುಡಿಯಬಾರದು; ಧರ್ಮವಾಗಿರಬೇಕು; ಎಲ್ಲರ

ಎಲ್ಲ ಹಕ್ಕುಗಳನ್ನು ಗೌರವಿಸಬೇಕು ; ಎಲ್ಲ ಬಗೆಯ ಬೆಳೆವಣಿಗೆ
ಸಮಾನವಾದ ಅವಕಾಶ ಕೊಡಬೇಕು ;—ಹೀಗೆ ಏರ್ಪಟ್ಟ ನ್ಯಾ
ಪದ್ಧತಿ ಉತ್ತಮ. ಸರಕಾರವೂ, ರಾಜನೂ ಒಟ್ಟಿಗೆ ಸಮಾಜ
ನಾಯಕರು, ಪ್ರತಿನಿಧಿಗಳು, ಅಧಿಕಾರಿಗಳು. ಆದರೆ ಸಮಾಜ ತನ
ಸರಿತೋರಿದಾಗ ಇವರಿಂದ ಅಧಿಕಾರವನ್ನು ಹಿಂದಕ್ಕೆ ತೆಗೆದುಕೊಂ
ಹೆಚ್ಚು ಸಮರ್ಪಕವಾದ ರಾಜಕೀಯ ಮತ್ತು ನ್ಯಾಯ ವ್ಯವಸ್ಥೆಗಳನ
ಮಾಡಿಕೊಳ್ಳಬಹುದು. ಸಮಾಜವು ಆ ಸಂಘಟನೆಯನ್ನೂ, ಕಾರ್ಯಶ
ಯನ್ನೂ ಉಳಿಸಿಕೊಳ್ಳಬೇಕು ಮಾತ್ರ. ಅದಕ್ಕೆ ಧೈರ್ಯ, ಜಾಗರೂಕ
ಬೇಕು. ಅಧರ್ಮಕ್ಕೆ ಬಾಗದಂತೆ ಮನಸ್ಸು ಸ್ಥಿರವಾಗಿರಬೇಕು. ಆದ
ನಿಂತದ್ದಕ್ಕೆ ಕೂತದ್ದಕ್ಕೆ ತಪ್ಪೆಣಿಸಿ ಬಂಡೇಳುವ ಅಶಾಂತ ವೃತ್ತಿ ಸಲ್ಲದ
ಅಂತಹ ಕಡೆ ಯಾವ ಸಮಾಧಾನವೂ ಬೆಳೆಯಲಾರದು.

೩

ರಾಜ್ಯದ ಆಡಳಿತಕ್ಕೆ ಮೂರು ಅಂಗಗಳುಂಟು ; ೧. ಶಾಸನದ ಅಂಗ
೨. ಕಾರ್ಯಾಂಗ, ೩. ನ್ಯಾಯ ನಿರ್ಣಯ ಮಾಡುವ ಅಂಗ. ಇವುಗಳ
ಇಲ್ಲಿ ನಮಗೆ ಸಂಬಂಧಿಸಿದವು ಒಂದನೆಯದು, ಮೂರನೆಯದು. ಒಂದ
ದೇಶದಲ್ಲಿ ಯಾವುದೆಲ್ಲ ಶಾಸನ, ಕಾನೂನು ಎಂದು ಏರ್ಪಡಿಸುವುದ
ಶಾಸನಾಂಗ. ಯಾವ ಅಂಶದಲ್ಲಾಗಲಿ ನ್ಯಾಯ ನಡೆದಿದೆಯೇ ಇಲ್ಲವೇ
ಎಂದು ಅಳೆದು ತೀರ್ಮಾನಿಸುವುದು ನ್ಯಾಯನಿರ್ಣಾಯಕಾಂಗ. ಇವೆರಡೂ
ಸೇರಿ ದೇಶದ ನ್ಯಾಯಜೀವನ ರಚಿತವಾಗುತ್ತದೆ. ಇವೆರಡೂ ಸ್ವತಂತ್ರ
ವಾಗಿ, ಯಾವ ಭೀತಿಯೂ ಇಲ್ಲದೆ ಸರ್ವಸಮದೃಷ್ಟಿಯಿಂದ, ಎಲ್ಲ ಪಕ್ಷಗಳ
ಹಿತದೃಷ್ಟಿಯಿಂದ ನಡೆದ ಹೊರತು ದೇಶದ ಮಂಗಳ ಶಕ್ಯವಿಲ್ಲ. ಒಳ್ಳೆಯ
ಶಾಸನಗಳನ್ನು ಮಾಡುವುದು ಎಷ್ಟು ಮುಖ್ಯವೋ, ಸರಿಯಾಗಿ ನ್ಯಾಯ
ನಿರ್ಣಯ ಮಾಡುವುದೂ ಅಷ್ಟೇ ಮುಖ್ಯ ; ಅಷ್ಟೇ ಅಗತ್ಯ. ಇನ್ನೂ
ಒಂದು ಪಟ್ಟು ಹೆಚ್ಚು ಮುಖ್ಯ ಎನ್ನಬಹುದು.

ಈ ಮೂರು ಅಂಗಗಳಿಗೂ ಉತ್ತಮವಾದ ರಾಜ್ಯ ಪದ್ಧತಿಗಳಲ್ಲಿ
ುತಿಗಳನ್ನು ಸ್ಥಾಪಿಸಿರುತ್ತಾರೆ. ಒಂದೊಂದಕ್ಕೆ ವಿರೋಧ ಬಂದರೆ
ರ್ಣಯ ಹೇಗೆ ಎಂಬುದನ್ನು ಗೊತ್ತುಮಾಡಿರುತ್ತಾರೆ. ಇದನ್ನು ಖಚಿತ
ಾಗಿ ಬರೆದಿಡುವರು. ಕೆಲವು ಕಡೆ ಎಲ್ಲವನ್ನೂ ಬರೆದಿಡದಿದ್ದರೂ, ಕೆಲವು
ಂಪ್ರದಾಯಗಳು ನಡೆದು ಬರುತ್ತಿರುವುದುಂಟು. ಈ ಶಿಸ್ತನ್ನೂ ಅದರ
ವರಣೆ ವಿಚಕ್ಷಣೆಗಳನ್ನೂ, ಅಲ್ಲಿನ ನಿರ್ಣಯ ವಿಧಾನಗಳನ್ನೂ ತಿಳಿಸುವ
ಾಸನಗಳಿಗೆ—'ಕಾನ್‌ಸ್ಟಿಟ್ಯೂಷನಲ್ ಲಾ' ಎಂದರೆ—ರಾಜ್ಯಾಂಗ ರಚನೆಗೆ
ಂಬಂಧಿಸಿದ ಶಾಸನ ಎಂದು ಹೆಸರು. ಇದು ರಾಜ್ಯಯಂತ್ರ, ಅಧಿಕಾರ
ವುಗಳ ಮಿತಿಯನ್ನೂ, ವ್ಯಾಪ್ತಿಯನ್ನೂ ತಿಳಿಸುತ್ತದೆ. ಇದಲ್ಲದೆ ಕೆಲವು
ೇಶಗಳಲ್ಲಿ ರಾಜಕಾರ್ಯವನ್ನು ನಡಸುವ ಅಧಿಕಾರಿ ವರ್ಗಕ್ಕೆ ಒಂದು,
ಾಮಾನ್ಯ ವ್ಯವಹಾರಕ್ಕೆ ಒಂದು ಎಂದು ಎರಡು ಬಗೆಯ ನೇಮವೂ
ಾಯಿದೆಯೂ ಇರುವುದುಂಟು. ಅಲ್ಲಿ ಅಧಿಕಾರಿಗಳಿಗೆ ವಿಶೇಷ ರಕ್ಷಣೆ,
ನುಕೂಲ, ಅವಕಾಶ ಇರುವುದು. ರಾಜ್ಯಾಧಿಕಾರಿಗಳಾಗಿ ಮಾಡಿದ
ಡತೆಯನ್ನು ಸಾಮಾನ್ಯ ಕಾನೂನು ಆಳುವುದಿಲ್ಲ. 'ಅಡ್ಮಿನಿಸ್ಟ್ರೇಟೀವ್
ಾ' ಎಂದು ಈ ಬಗೆಯುದಕ್ಕೆ ಹೆಸರು. ಹೀಗಾಗಿ ಅಧಿಕಾರ ವರ್ಗಕ್ಕೆ
ಂದು ವಿಶೇಷ ಪ್ರಾಬಲ್ಯ ಬರುತ್ತದೆ. ಕಾನೂನಿನಲ್ಲಿ ಅಸಮತೆ ಉಂಟಾಗು
ುದೆ. ಅಧಿಕಾರಿಗಳಲ್ಲದಿದ್ದರೂ ಯಾವುದಾದರೊಂದು ಪಂಗಡಕ್ಕೂ,
ರ್ಗಕ್ಕೂ ಹೆಚ್ಚಿನ ಸ್ಥಾನವನ್ನು ಕೊಡುವ ಶಾಸನಾವಕಾಶ ಇದ್ದರೆ
ಂಥಲ್ಲಿಯೂ ಅಸಮತೆ, ಅನ್ಯಾಯ ಉಂಟಾಗುವುದು. ಪ್ರಜೆ ಪ್ರಜೆಗೆ
ಾವ ಬಗೆಯ ವ್ಯತ್ಯಾಸವೂ ಕಾನೂನಿನ ದೃಷ್ಟಿಯಲ್ಲಿ ಎಲ್ಲಿ ಇರುವುದಿ
ವೋ, ಎಲ್ಲಿ ಕಾನೂನಿನ ಎದುರು ಯಾರೇ ಆಗಲಿ ಸಮವೋ, ಎಲ್ಲಿ
ಲ್ಲರಿಗೂ ಪಕ್ಷಪಾತವಿಲ್ಲದ ನ್ಯಾಯ ಸಿಕ್ಕುತ್ತದೆಯೋ ಅಂತಹ ನ್ಯಾಯ
ದ್ಧತಿ ಉತ್ತಮ. ದೇಶದ ಸಾಧಾರಣ ಕಾನೂನು ಸಾರ್ವಜನಿಕ.
ನ್ನೊಂದು ಖಾಸಗಿ ನ್ಯಾಯ. ಖಾಸಗಿಯೆಂದರೆ ಆಯಾ ಬಣಗಳ, ಕುಲ

ಮತಗಳ ಜನಕ್ಕೆ ಮಾತ್ರ ಸಂಬಂಧಿಸಿದ ಕಟ್ಟುಪಾಡು. ಅಂಥವ
ಎಡೆಯುಂಟು. ಸಾಧಾರಣ ಶಾಸನ ನಮ್ಮಲ್ಲಿಯೂ ಈಗ ಎಲ್ಲರಿ
ಸಮ; ಆದರೆ ಹಿಂದೂ, ಮುಸಲ್ಮಾನ್, ಪಾರ್ಸಿ, ಕ್ರೈಸ್ತರ ಖಾ
ನ್ಯಾಯಗಳು ಉಂಟು. ದೇಶದ ಕಾನೂನಲ್ಲಿ ಒಂದು ಪಂಗಡ ಕಿ
ಎಂದು ಅವರ ಮೇಲೆ ಅಸಮತೆಗಳನ್ನೂ ಕಷ್ಟಗಳನ್ನೂ ಹೊರಿಸಿ
ಅದು ಅಧರ್ಮ. ಜರ್ಮನಿಯಲ್ಲಿ ಯಹೂದೀಯರ ಮೇಲೆ ಹೊತ್ತಿ
ಆದರೆ ಬಿಳಿಯರಿಗೆ ಚೀನೀ ಜಪಾನಿಯರಿಗೆ ನಮ್ಮಂಥ ನಾಡುಗಳಲ್ಲಿ ಬೆ
ಕಾನೂನು ಇರುವುದು ನ್ಯಾಯ. ಅವರ ದೇಶದ ನ್ಯಾಯ ಪದ್ಧತಿಗಳ
ಅವರ ಸಂಪ್ರದಾಯಗಳಿಗನುಗುಣವಾಗಿ ನ್ಯಾಯ ನಿರ್ಣಯ ಅವಕಾಶ
ಕೊಡಬಹುದು (Private-personal law). ಈ ದೇಶದವರಿಗೂ ಅವರಿಗ
ಸಂಬಂಧಿಸಿದಾಗ ಮಾತ್ರ ಇಲ್ಲಿನ ವ್ಯವಹಾರ ಪದ್ಧತಿಯೇ ಇಬ್ಬರಿಗ
ಸಮವಾಗಿ ಅನ್ವಯಿಸುವುದು. ಎಲ್ಲರ ಎಲ್ಲ ನಡತೆಯನ್ನೂ, ರಾಜ, ಪ್ರ
ಅಧಿಕಾರಿ ಎನ್ನದೆ ಸರ್ವ ಸಮವಾಗಿ ಎಲ್ಲಿ ಕಾನೂನು ನಡಸುವುದೋ
ಅಂತಹ ಕಡೆ ನ್ಯಾಯಶಾಸನ ಆಳುತ್ತದೆ ಎನ್ನಬಹುದು.

೪

ಯಾವ ಯಾವ ಕಟ್ಟುಪಾಡು, ನೇಮ, ಕಾರ್ಯವಿಧಾನ, ಸಂಪ್ರದಾಯ
ಪ್ರಮಾಣ, ಪ್ರಭಾವ ನ್ಯಾಯನಿರ್ಣಯಕಾಲದಲ್ಲಿ ಸೇರುತ್ತವೆಯೋ
ಅವೆಲ್ಲ—ಕಾನೂನು ಅಥವಾ ಶಾಸನ ಎಂಬ ಮಾತಿನಲ್ಲಿ ಅಡಗಿವೆ. ಕೆಲ
ಸಂಗತಿಗಳು ಕಾನೂನಲ್ಲಿ ಬರೆದು ಇಡದಿದ್ದರೂ ನಡೆದುಕೊಂಡ
ಪೂರ್ವಾಚಾರವಾಗಿ, ದೇಶಾಚಾರವಾಗಿ ನಡೆಯುತ್ತಿರುತ್ತವೆ. ಅವಕ
ವಿರೋಧವಾಗದೆ ನಡವಳಿಕೆ ನಡೆಯುತ್ತದೆ. ಯಾವ ನ್ಯಾಯಪದ್ಧ
ಯಲ್ಲಿಯೇ ಆಗಲಿ ಅವನ್ನು ಮುರಿಯುವ, ಮೀರುವ ಅಥವಾ ಧಿಕ್ಕರಿಸು
ಧೈರ್ಯ ಜನಕ್ಕೆ ಇರುವುದಿಲ್ಲ; ಅಂಥ ಅವಕಾಶವಿರುವುದಿಲ್ಲ. ಬರೆದಿ

ದಿದ್ದರೂ ಸ್ಪಷ್ಟವಾಗಿ ಬರೆದಿಟ್ಟ ಕಾನೂನಂತೆಯೇ ಅವಕ್ಕೆ ಪ್ರಭಾವ ಉಂಟು. ಎರಡನೆಯದಾಗಿ ಶಾಸನ ಸಭೆಗಳಲ್ಲಿ ಬಹುಮತದಿಂದಲೋ, ಬೇರೆ ಯಾವ ರೀತಿಯಿಂದಲೋ—ಒಪ್ಪಿ ಗೊತ್ತುಮಾಡಿದ ಕಾನೂನು. (೩) ಯಾರು ರಾಜ್ಯದ ಮೇಲ್ಪಟ್ಟ ಅಧಿಕಾರಿಯೋ ಆತನ ಅಪ್ಪಣೆ; ಆತನು ರಚಿಸಿದ ನಿಯಮ. (೪) ಈ ಮೂರರ ಜೊತೆಗೆ ನ್ಯಾಯಾಸ್ಥಾನಗಳಲ್ಲಿ ಕೊನೆಯ ನಿರ್ಣಯ ಮಾಡುವ ಅಧಿಕಾರವುಳ್ಳ ನ್ಯಾಯಾಧೀಶರು ಮಾಡಿದ ತೀರ್ಮಾನಗಳು—ಸೇರುತ್ತವೆ. ಆದುದರಿಂದ ಈ ನಾಲ್ಕಕ್ಕೂ ಕಾನೂನಿನ ಎಲ್ಲ ಶಕ್ತಿಯೂ, ವ್ಯಾಪ್ತಿಯೂ ಉಂಟು. ಇವೆಲ್ಲವನ್ನು ಸುತ್ತಿಕೊಂಡು ಜನಾಭಿಪ್ರಾಯ, ಜನದ ಧರ್ಮಬುದ್ಧಿ ಇರುತ್ತವೆ. ಇವೇ ಎಲ್ಲಕ್ಕೂ ಆವರಣ; ಅವನ್ನು ಒಂದು ಶೀಲದಲ್ಲಿ ನಡಸುವ ಶಕ್ತಿ.

ಸದ್ಯಕ್ಕೆ ಆಳುವವರೂ ಪ್ರಜೆಗಳೂ ವಿರೋಧಿಗಳಲ್ಲ; ಪ್ರಜೆಗಳ ಇಷ್ಟಕ್ಕೆ ಒಳಪಟ್ಟೇ ದೇಶದ ವ್ಯವಹಾರಜೀವನ ನಡೆಯುತ್ತದೆ ಎನ್ನೋಣ. ಹಾಗೆಯೇ ದೇಶದಲ್ಲಿ ನಡೆಯುವ ಸರಕಾರ ಜನಸಮ್ಮತವಾಗಿದೆ, ಜನಕ್ಕೆ ಹೊಣೆಹೊತ್ತು ನಡೆಯುತ್ತಿದೆ ಎಂದು ಒಪ್ಪಿಕೊಳ್ಳೋಣ. ಜನರು ಶಾಸನ ಸಭೆಗಳಲ್ಲಿ ಮಾಡುವ ನಿರ್ಣಯಗಳಿಗೆ ಬಾಗಿ ಸರಕಾರ ಕೆಲಸಮಾಡುತ್ತದೆ; ವಿರೋಧವಾದರೆ ಸರಕಾರದ ಅಧಿಕಾರಮಂಡಲವೇ ಬೇರೆಯಾಗುವುದು ಎಂದೂ ಒಪ್ಪೋಣ. ಇಂತಹ ರಾಜ್ಯಗಳಲ್ಲಿ ಯಾವುದಾದರೂ ಒಂದು ನೇಮಕ್ಕೆ ಒಳಪಟ್ಟು ಶಾಸನ ಸಭೆ ರಚಿತವಾಗಿರುತ್ತದೆ. ಎಲ್ಲಿ ಬುದ್ಧಿಯ ವಯಸ್ಸಿಗೆ ಬಂದ ಸಭ್ಯರೆಲ್ಲರಿಗೂ ಮತ ಕೊಡುವ ಅಧಿಕಾರವುಂಟೋ ಆ ರಾಜ್ಯ ಬಹುಮಟ್ಟಿಗೆ ಧಾರಾಳವಾಗಿ ರಾಜಕೀಯ ಜೀವನವನ್ನು ನಡಸಬಲ್ಲುದು. ರಾಜ್ಯದ ಒಟ್ಟು ಹಿತದೃಷ್ಟಿಯಿಂದ ತಮ್ಮ ಪರವಾಗಿ ಅಭಿಪ್ರಾಯವನ್ನು ತಿಳಿಸಲು ಶಾಸನ ಸಭೆಗಳಿಗೆ ಯಾರನ್ನು ಆಯ್ದು ಕಳಿಸುತ್ತಾರೊ ಅಂಥವರು ಆಯಾ ಪ್ರದೇಶದ ಪ್ರತಿನಿಧಿಗಳು. ಯೋಗ್ಯತೆ, ಶೀಲ, ದೇಶಹಿತಬುದ್ಧಿ,

ಇತರರೊಡನೆ ಬೆರೆದು ಸಮರಸದಲ್ಲಿ ಕೆಲಸಮಾಡುವ ಶಕ್ತಿ ಇರುವ
ಪ್ರತಿನಿಧಿಗಳು ಶಾಸನ ಸಭೆಗಳಲ್ಲಿ ಕುಳಿತು ಸರಕಾರದ ಮತ್ತು ಸಮ
ಹಿತದ ವಿಚಾರಗಳನ್ನು ಪರೀಕ್ಷಿಸುತ್ತಾರೆ. ಸಲಹೆ ಸಿಫಾರಸು ಮಾ
ತ್ತಾರೆ. ನಡೆದಿರುವ ಕೆಲಸವನ್ನೂ, ನಡೆಯಬೇಕಾದುದನ್ನೂ ಆ ಕೆಲಸ
ವಿಧಾನಗಳನ್ನೂ ಕುರಿತು ನಿರ್ಭಯವಾಗಿ ಟೀಕೆ ಮಾಡುತ್ತಾ
ಪ್ರಶ್ನೆಗಳನ್ನು ಕೇಳುತ್ತಾರೆ; ಆಕ್ಷೇಪಣೆ, ಖಂಡನೆ ಮಾಡುತ್ತಾ
ತಮ್ಮ ಅಭಿಪ್ರಾಯ ಸರಿ ಎಂದು ಸ್ಥಾಪಿಸಿ ತಮ್ಮ ಕಡೆಗೆ ಸ
ಯನ್ನು ಒಲಿಸಿಕೊಳ್ಳಲು ಪ್ರಯತ್ನಿಸುತ್ತಾರೆ. ಕೆಲವು ಸಂದರ್ಭಗಳ
ತೀವ್ರವಾಗಿ ಪ್ರತಿಭಟಿಸುತ್ತಾರೆ. ಇಂಥ ಸಲಹೆ ಟೀಕೆ, ವಿಮರ್ಶೆ
ಪ್ರತಿಭಟನೆಗಳಿಗೆ ಒಳಪಟ್ಟೇ ರಾಜಕಾರ್ಯದ ಹೊಣೆ ಹೊತ್ತ ರಾಜಾ
ಕಾರಿಗಳು ಕಾರಭಾರ ಮಾಡಬೇಕಾಗುತ್ತದೆ. ಇಂಥವರಿಗೆ ಸಮರ್ಪಕವಾ
ಸಮಾಧಾನ ಹೇಳಬೇಕಾಗುತ್ತದೆ. ತಪ್ಪೊಪ್ಪಿ ತಿದ್ದಿಕೊಳ್ಳಬೇಕಾಗುತ್ತದ
ಸಭ್ಯರಾಗಿ ನಡೆಯುವವರೆಗೆ ಸಭೆಯಲ್ಲಿ ಈ ಪ್ರತಿನಿಧಿಗಳು ಬೇಕಾದ್ದನು
ಮಾತಾಡಬಹುದು. ಆಡಿದುದನ್ನು ನ್ಯಾಯವಾಗಿ ಮರ್ಯಾದೆಯಿಂದ
ಸ್ಥಾಪಿಸುವ ಹೊಣೆಗಾರಿಕೆ ಮಾತ್ರ ಅವರದು. ಅವರು ಜನಹಿತ
ದಿಂದ ಆಡಿದ ಮಾತಿಗೆ, ಮಾಡಿದ ಟೀಕೆಗೆ ಸರ್ವಮಾನ್ಯತೆ ಉಂಟು
ಶಿಕ್ಷೆಯ ಹೆದರಿಕೆ ಇಲ್ಲ. ಇಲ್ಲಿ ನಡೆದುದನ್ನೆಲ್ಲಾ ಹೊರಗಿನ ಜನವೂ
ವೃತ್ತಪತ್ರಿಕೆಗಳವರೂ ಪ್ರಕಟಿಸುತ್ತಿರುತ್ತಾರೆ. ಎಲ್ಲ ನಡವಳಿಕೆಗಳನ್ನು
ಕುರಿತು ತಮಗೆ ತೋರಿದಂತೆ ಅವರು ಟೀಕೆ, ವಿಮರ್ಶೆ ಮಾಡುತ್ತಿರು
ತ್ತಾರೆ. ದೇಶದ್ರೋಹ ಮತ್ತು ವ್ಯಕ್ತಿಗೆ ಅಪಮಾನಕರವಾದ್ದು, ನಷ್ಟಕರ
ವಾದ್ದು ಅಲ್ಲದ ಎಲ್ಲ ಅಭಿಪ್ರಾಯಗಳನ್ನೂ ಇಲ್ಲಿ ಪ್ರಕಟಿಸಬಹುದಾಗಿರು
ತ್ತದೆ. ಹೀಗಿರುವಾಗ ಜನದ ಮತ್ತು ಜನದ ಪ್ರತಿನಿಧಿಗಳ ಅಭಿಪ್ರಾಯ
ಹೀಗೆ ಇದೆ ಎಂದು ಸರಕಾರದ ಅಧಿಕಾರಿಗಳಿಗೆ ಸ್ಪಷ್ಟವಾಗುತ್ತಿರುತ್ತದೆ
ಈ ಜನಾಭಿಪ್ರಾಯಕ್ಕೆ ತಗ್ಗಿ ನಡೆಯುವ ನಿಯಮ ಇಂಥಾ ಸರಕಾ

ಗಳಲ್ಲಿ ಕಡ್ಡಾಯ. ಶಾಸನ ಸಭೆಗಳಿಗೆ ಬಂದಮೇಲೆ ಅಂಥವರಿಗೆ ಇದೇ ರೀತಿ ಅಭಿಪ್ರಾಯ ಪ್ರಕಾಶಮಾಡಲು ಅವಕಾಶ ಕೊಡಬೇಕು. ಅವರು ಆಡಿದ ಮಾತುಗಳಿಗೆ ಅವಕಾಶ ಉಂಟು; ಅಲ್ಲಿರುವ ವರೆಗೂ ಸರಕಾರದ ಯಾವ ಬಗೆಯ ನಿರ್ಬಂಧವೂ ಅವರನ್ನು ತಡೆಯಕೂಡದು ಎಂಬ ಕಾನೂನು ಪ್ರಜೆಯ ಹಕ್ಕನ್ನು ಸ್ಥಾಪಿಸಿರುತ್ತದೆ. ಇಂಥ ಪ್ರತಿನಿಧಿಯಾಗುವುದಕ್ಕೂ, ಪ್ರತಿನಿಧಿಗಳನ್ನು ಆರಿಸುವುದಕ್ಕೂ, ಸಭೆಯ ಒಳಗೂ ಹೊರಗೂ ದೇಶಹಿತ ಸಾಧಕವಾದ ಅಭಿಪ್ರಾಯಗಳನ್ನು ಮಂಡಿಸುವುದಕ್ಕೂ, ಸಾಧಿಸುವುದಕ್ಕೂ, ಕಾನೂನಿನ ಮೂಲಕ ಹಕ್ಕು ಕೊಟ್ಟಿರುವುದುಂಟು. ಒಂದು ಕಡೆ ಶಾಸನ ಸಭೆಗಳಲ್ಲಿ ಈ ರೀತಿ ವಿಮರ್ಶೆ ನಡೆದರೆ, ಅದೇ ಸಭೆಯಲ್ಲಿಯೇ ಸಭಿಕರ ಸಲಹೆ ಸರಕಾರಕ್ಕೆ ಸ್ಪಷ್ಟವಾಗಿ ತಿಳಿಯುವ ಅವಕಾಶವಿರುತ್ತದೆ. ನಡೆದಿರುವ ಕೆಲಸಗಳಿಗೆ ಒಪ್ಪಿಗೆ ಪಡೆಯಬಹುದಾಗಿರುತ್ತದೆ. ನಡೆಯಬೇಕಾಗಿರುವುದಕ್ಕೆ ಅಪ್ಪಣೆ, ಒಪ್ಪಿಗೆ ತೆಗೆದುಕೊಳ್ಳಬಹುದಾಗಿರುತ್ತದೆ. ಪ್ರಜೆಗಳ ಕಡೆಯಿಂದ ಒಪ್ಪಿಗೆ ತಿದ್ದುಪಾಡು ದೊರೆತಿವೆಯೆಂದು ತಿಳಿದ ಸರಕಾರದ ಕೆಲಸ ಸೂಸೂತ್ರ. ತಮ್ಮ ಅಭಿಪ್ರಾಯವು ನಡೆಯಿತೆಂದು ತೃಪ್ತಿ, ಸಮಧಾನ ಇವರಿಗೆ. ಎರಡು ಪಕ್ಷಕ್ಕೂ ನಂಬಿಕೆ, ವಿಶ್ವಾಸ, ಹೊಂದಿಕೆ ಏರ್ಪಡುವುವು.



೫

ಸರಕಾರದ ಹೊಣೆಗಾರಿಕೆಯೂ, ಸಭಿಕರ ಹಕ್ಕೂ, ಕಾನೂನಲ್ಲಿ ಖಚಿತವಾಗಿರುವುವು. ಹೊಸದಾಗಿ ಯಾವುದಾದರೊಂದು ಶಾಸನ ಅಗತ್ಯ ಎಂದು ಆಡಳಿತದವರಿಗೊ ಶಾಸನ ಸಭೆಯ ಸಭಿಕರಿಗೊ ತೋರಬಹುದು. ಆ ಬಗ್ಗೆ ಮುಂಚಿತವಾಗಿಯೇ ಸಭೆಗೆ ತಿಳಿವಳಿಕೆ ಕೊಡುತ್ತಾರೆ. ಅದನ್ನು ಚರ್ಚೆಗೆ ತೆಗೆದುಕೊಂಡು ಎರಡುಮೂರು ಮಜಲುಗಳಲ್ಲಿ ವಿಮರ್ಶೆ ಮಾಡಿ ಇದುವರೆಗೂ ಇದ್ದ ಪದ್ಧತಿಯೇನು! ಹೊಸದಕ್ಕೆ ಅಗತ್ಯ

ವೇನು ? ಹಿಂದಿನದರ ತೊಂದರೆ ಏನು ? ಇದರ ಅನುಕೂಲವೇನ
ಹಿಂದಿನ ದೋಷಗಳು ಹೊಸ ಮಾರ್ಪಾಡಿನಿಂದ ಹೋಗುತ್ತವೆಯ
ಹೊಸದಕ್ಕೆ ಸಂಬಂಧಿಸಿದ ಹಾಗೆ ಇತರ ಯಾವ ಅನ್ಯಾಯ, ನ
ಬೇರೆ ಹೇಗಾದರೂ ಆಗಬಹುದೆ ! ಎಂಬವು ತಳ ಮುಟ್ಟುವ
ಚರ್ಚೆಗೀಡಾಗುತ್ತವೆ. ಕಾನೂನು ರಚನೆಯನ್ನೂ, ಪರಿಭಾಷೆಯನ
ತಿಳಿದವರು ಒಂದು ಮಜಲಿನಲ್ಲಿ ಸೂಚಿತವಾದ ಇದಕ್ಕೆ ಒಂದು ರೂಪವನ
ಕೊಡುತ್ತಾರೆ. ಇದರಿಂದ ಯಾವ ಪಂಗಡಗಳವರಿಗೆ ಲಾಭವೋ, ಯಾರ
ನಷ್ಟವೋ ಅವರೆಲ್ಲರೂ ತಮ್ಮ ಅಭಿಪ್ರಾಯಗಳನ್ನು ಸೂಚಿಸುತ್ತಾ
ಸಭೆಯ ಅಭಿಮತವನ್ನು ಕೂಡದೆನ್ನುವ ಕಡೆಗೋ, ಬೇಕೆನ್ನುವ ಕಡೆಗೊ
ತಿರುಗಿಸಿ ಬಹುಮತವನ್ನು ತಮ್ಮ ಕಡೆ ಒಲಿಸಿಕೊಳ್ಳಲು ಪ್ರಯತ್ನಿಸುತ್ತಾ
ನಾಡಿನಲ್ಲಿ ಅನೇಕ ಪಕ್ಷಗಳೂ, ಪ್ರಯೋಜನವನ್ನು ಬಯಸುವ ಜನವಗ
ಗಳೂ ಇರುವುದರಿಂದ ಒಬ್ಬರಿಗೆ ಹಿತವಾದದ್ದು ಇನ್ನೊಬ್ಬರಿಗೆ ಹಿತವಾಗ
ಇರಬಹುದು. ದೃಷ್ಟಿವ್ಯತ್ಯಾಸ ಇರಬಹುದು. ಒಂದು ರೀತಿ ನಡೆದ
ಕೊಂಡರೆಯೇ ಜನಹಿತವನ್ನು ಮೇಲಾಗಿ ಸಾಧಿಸಬಹುದೇ ಹೊರತ
ಮತ್ತೊಂದುರೀತಿ ಶಕ್ಯವಾಗದು ಎಂದು ಉಗ್ರವಾಗಿಯೋ ಹಟದಿಂದಲೊ
ನುಡಿಯುವವರೂ, ತಡೆಯುವವರೂ, ಒತ್ತುವವರೂ ಇರಬಹುದು. ಅಂ
ವರು ಪ್ರಬಲಪಕ್ಷಗಳಾಗಿರಬಹುದು. ಆದುದರಿಂದ ಪ್ರತಿಯೊಂದು ಮ
ಲಲ್ಲಿಯೂ ವಾದ, ಚರ್ಚೆ ತೀವ್ರವಾಗಿ ನಡೆಯುವುವು. ಹೆಚ್ಚು ಮಾತನ
ಡುವ ಶಕ್ತಿಯಿಲ್ಲದ ಅಥವಾ, ಮುಂದುವರಿಯದಿದ್ದ ಪಂಗಡಗಳಿ
ಅನ್ಯಾಯವಾಗದಂತೆ ನೋಡಿಕೊಳ್ಳುವುದೂ ಇಂದು ಅಗತ್ಯ.

ಈ ಮಜಲುಗಳೊಂದರಲ್ಲಿಯಾದರೂ ಸಾಮಾನ್ಯವಾಗಿ ಅನೇ
ದೃಷ್ಟಿಗಳಲ್ಲಿ ಪರ್ಯಾಲೋಚಿಸಿ ಇದರ ಫಲಾಫಲ ಗೊತ್ತುಮಾಡಿ ವರ
ಮಾಡಲೆಂದು, ಹೆಚ್ಚು ಜನಕ್ಕೆ ಹೆಚ್ಚು ಪ್ರಯೋಜನವಾಗಲೆಂದು ಅ
ಕಡಮೆ ಜನರಿಗೆ ಅತಿ ಕಡಮೆ ನಷ್ಟವಾಗುವಂತೆ ಏರ್ಪಡಿಸಲು ಶಾಸನಕ್ಕೆ

ೂಪ ದೊರಕಿಸುವ ವ್ಯವಸ್ಥೆ ಇರುತ್ತದೆ. ಅದರ ವರದಿಯನ್ನು ಪುನಃ
ಾಸನದ ಸಭೆಯ ಮುಂದೆ ತರುತ್ತಾರೆ. ಈ ಎಲ್ಲ ಕಾಲದಲ್ಲಿಯೂ
ಭೆಯ ಹೊರಗಿನ ವೃತ್ತಪತ್ರಿಕೆಗಳವರೂ, ಈ ವಿಷಯದಲ್ಲಿ ನುರಿತ
ನುಭವವುಳ್ಳವರೂ, ವಿದ್ವಾಂಸರೂ, ಪಕ್ಷಪ್ರಯೋಜನಗಳವರೂ ಬೇಕಾದ
ಾಗೆ ವಿಷಯವನ್ನು ಕುರಿತು ಬರೆಯುತ್ತಾರೆ. ಉಪನ್ಯಾಸ ವೇದಿಕೆ
ಳಿಂದಲೂ ಅಧಿಕಾರಿಗಳ ಭೇಟಿಯಲ್ಲಿಯೂ ವಿರೋಧವನ್ನೋ, ಸಹಾನು
ೂತಿಯನ್ನೋ ಸೂಚಿಸಿರುತ್ತಾರೆ. ಹೀಗಾಗಿ ಜನಾಭಿಪ್ರಾಯ ಒಂದು
ೀತಿ ಸ್ಪಷ್ಟಪಡುತ್ತದೆ; ದೃಢಪಡುತ್ತದೆ. ಇದರ ಪರಿಣಾಮವೆಲ್ಲಾ
ಡೆಯಲ್ಲಿ ರೂಪುಗೊಳ್ಳುವ ಶಾಸನದಲ್ಲಿ ಬಹುಮಟ್ಟಿಗೆ ಕಾಣುತ್ತದೆ.
ಇಷ್ಟೆಲ್ಲ ನಡೆಯಬೇಕಾದರೆ ಸ್ವಲ್ಪ ಕಾಲಾವಕಾಶ ಇದ್ದೇ ಇರುವುದು.
ಆದ್ದರಿಂದ ಬೇಕಾದ ಹಾಗೆ ಜನಾಭಿಪ್ರಾಯವನ್ನು ಶಾಸನದಲ್ಲಿ ರೂಪಿಸು
ವುದು ಶಕ್ಯ.

ಕೆಲವುದೇಶಗಳಲ್ಲಿ ಎರಡು ಶಾಸನ ಸಭೆಗಳು ಇಂಥ ಕೆಲಸಕ್ಕೆ ತೊಡಗಿ
ಸಮ್ಮತಿ ಕೊಡಬೇಕಾಗಿರುವುದು. ಒಂದರಲ್ಲಿನ ಸಭಿಕರ ಮನೋ
ವೃತ್ತಿಯೂ, ಇನ್ನೊಂದರಲ್ಲಿನದೂ ಬೇರೆ ಬೇರೆ ವರ್ಗಗಳವರದು ; ಬೇರೆ
ಬೇರೆ ಅನುಭವ ಪ್ರಪಂಚದ್ದು. ಆದ್ದರಿಂದ ಒಟ್ಟಿನಲ್ಲಿ ಯೋಚನೆ ಮಾಡ
ಎಲ್ಲವರ ಅಭಿಪ್ರಾಯವೆಲ್ಲ ಸುಮಾರು ಗೊತ್ತಾಗಲೂ, ನೆರೆಯಲೂ ಅವಕಾಶ
ವಾಗುತ್ತದೆ. ಈ ಎಲ್ಲ ಸಂಬಂಧದಲ್ಲಿಯೂ, ಇವೊತ್ತಿನ ಅಥವಾ ಸದ್ಯದ
ಪ್ರಯೋಜನಗಳ ಎಣಿಕೆ ಮಾತ್ರವೇ ಅಲ್ಲ, ನಾಳೆಯ ಮತ್ತು ಮುಂದಿನ
ತಲೆಮೊರೆಗಳ ಪ್ರಯೋಜನವನ್ನು ಗಮನಕ್ಕೆ ತಂದುಕೊಳ್ಳುವರು. ಈ
ನಿಯಮದ ಫಲವಾಗಿ ಈ ದೇಶಕ್ಕೂ ಇನ್ನೊಂದಕ್ಕೂ ಮನಸ್ತಾಪ ಬಾರ
ದಂತೆಯೂ ಅವರಿಗೆ ಯಾವ ನಷ್ಟವೂ ಅನ್ಯಾಯವೂ ಆಗದಂತೆಯೂ
ಶಕ್ಯವಾದ ಮಟ್ಟಿಗೆ ನೋಡಿಕೊಳ್ಳುವ ಯೋಚನೆ ಇದ್ದೇ ಇರುತ್ತದೆ.
ಇಷ್ಟೆಲ್ಲ ಆದಮೇಲೆ ಸಭೆಗಳಲ್ಲಿನ ಬಹುಮತದ ತೀರ್ಮಾನ ಅದಕ್ಕೆ

ದೊರೆತರೆ* ರಾಜ್ಯದ ಅತ್ಯುನ್ನತ ಅಧಿಕಾರಿಯಾದ ರಾಜನ ಅ
ಅಧ್ಯಕ್ಷನ ಸಮ್ಮತಿ ಪಡೆದು ಅದು ವಿಧಿಯಾಗುತ್ತದೆ. ಅಂದಿನಿಂದ
ದೇಶದ ಕಾನೂನು.

ಹೊಸದಾಗಿ ಕಾನೂನನ್ನು ಹೇಗೆ ಮಾಡುತ್ತಾರೆಯೋ ಹಳೆಯದ
ತಿದ್ದುವುದೂ, ಮಾರ್ಪಡಿಸುವುದೂ, ರದ್ದುಮಾಡುವುದೂ ಸುಮ
ಹೀಗೆಯೇ. ಕೆಲವು ಅವಸರದ ಸಮಯಗಳಲ್ಲಿಯೋ ಆಪತ್ಸಮಯ
ಲ್ಲಿಯೋ ಬಹು ಬೇಗ ಶಾಸನ ಏರ್ಪಡಬೇಕಾದ ಅಗತ್ಯ ಬೀಳುವು
ಆಗ ಜನಕ್ಕೆಲ್ಲ ಆ ಅಗತ್ಯ ಕಂಡಿದ್ದರೆ ಬಹು ತ್ವರೆಯಿಂದ ಅದ
ಮಾಡಿ ಮುಗಿಸುತ್ತಾರೆ. ಕೆಲವು ಸಂದರ್ಭಗಳಲ್ಲಿ ಒಂದೇ ದಿನದಲ್ಲಿ
ಎರಡು ಮೂರು ಮಜಲಿನ ಕೆಲಸವನ್ನೂ ಮಾಡಿ ಮುಗಿಸಬಹುದು. ಯು
ಸಮಯಗಳಲ್ಲಿಯೂ ದೇಶಕ್ಕೆ ಕೇಡಿನ ಭಯ ತೀವ್ರವಾಗಿರುವಾಗ
ಹೀಗೆ ನಡೆಯುವುದು ವಾಡಿಕೆ. ಅಂಥವು ಅಪರೂಪ. ಇನ್ನು ಕೆ
ಸಂದರ್ಭಗಳಲ್ಲಿ ಸರಕಾರದ ಮೇಲಧಿಕಾರಿಗಳೇ ಆರೋಗ್ಯ, ಶಾ
ಸುರಕ್ಷಣೆ, ಸುಭಿಕ್ಷಗಳ ಸಾಧನೆಗಾಗಿ ಸ್ವಂತ ಜವಾಬ್ದಾರಿಯ ಮೇ
ಅವಸರ ಶಾಸನವನ್ನು ಮಾಡುವುದುಂಟು. ಅಂಥವಕ್ಕೆ ಕಾಲದ ಮಿತಿ,
(ಉದಾ :—ತಿಂಗಳು, ಮೂರು ತಿಂಗಳು—)ಇರುತ್ತದೆ. ಆ ಮಿತಿಯು ಮು
ಯುವುದರೊಳಗಾಗಿ ಸರಕಾರವು ಶಾಸನ ಸಭೆಗಳ ಒಪ್ಪಿಕೆಯನ್ನು ತೆಗೆ
ಕೊಳ್ಳಬೇಕಾಗುತ್ತದೆ. ಮಿತಿಯಿಲ್ಲದೆ ರಾಜಾಧಿಕಾರಿಗಳು ಹೀಗೆ ಅವಸರ
ಅಧಿಕಾರವನ್ನು ನಡಸಕೂಡದೆಂಬ ನಿರ್ಬಂಧವಿರುತ್ತದೆ. ಇದು ಜನಗ
ಹಕ್ಕು, ಅಧಿಕಾರಿಗಳ ಹೊಣೆ. ಇದಕ್ಕೆ ಸಂಬಂಧಿಸಿದಂತೆ ಮೂ

---

* ಅಲ್ಪ ಸಂಖ್ಯಾತ ವರ್ಗಗಳವರ ಹಿತಕ್ಷೇಮ ಈ ಬಹುಮತದ ಪ್ರಭಾವದಲ್ಲಿ ಮುಳ
ಕೊಚ್ಚಿಹೋಗದಂತೆ ಅವರಿಗೆ ಕೆಲವು ರಕ್ಷಣೆಗಳನ್ನು ಕೊಡುವುದುಂಟು. ಅವರ ಅಭಿಪ್ರಾಯ
ವಿಶೇಷ ಗೌರವ ಕೊಟ್ಟೇ ತೀರಬೇಕೆಂದು ನಿಯಮಗಳನ್ನೂ ಸಮಯಗಳನ್ನೂ ಕಲ್ಪಿಸಿರುವುದುಂಟ
ಇಲ್ಲವಾದರೆ ಬಹುಮತದ ಹೆಸರಲ್ಲಿ ಅನೇಕ ಮಂದಿಗೆ ಕಷ್ಟ ನಷ್ಟ ಅನ್ಯಾಯ ಆಗಬಹುದು.

ಾಸನಗಳೇ ಇರುತ್ತವೆ. ಹೀಗೆ ಶಾಸನಾಂಗಕ್ಕೆ ಕಾರ್ಯಾಂಗ ಒಳಪಟ್ಟು ಅದಕ್ಕೆ ವಿರೋಧವಾಗದ ರೀತಿಯಲ್ಲಿ ಸಮಾಜಹಿತಕಾರ್ಯ ನಡಸುವುದು ಕ್ಯವಾಗುವುದು.

ಕೆಲವು ದೇಶಗಳಲ್ಲಿ ಸಾಮಾನ್ಯ ಕಾನೂನನ್ನು ಮಾಡುವುದಕ್ಕೆ ಯಾವ ವಿಧಾನವನ್ನು ಬಳಸುವರೋ ರಾಜ್ಯಾಂಗರಚನೆಗೆ ಸಂಬಂಧಿಸಿದ ನ್ನು ಮಾಡಲು ಅದನ್ನೇ ಬಳಸಿಕೊಳ್ಳುತ್ತಾರೆ. ಎಂದರೆ ರಾಜನ ಅಧಿಕಾರದ ಮಿತಿಗಳು, ಶಾಸನಾಂಗ ಕಾರ್ಯಾಂಗ ಮತ್ತು ನ್ಯಾಯ ನಿರ್ಣಯಾಂಗಗಳ ಪರಸ್ಪರ ಸಂಬಂಧ, ಅಧಿಕಾರ, ಕಾರ್ಯವ್ಯಾಪ್ತಿ ಇವಕ್ಕೆ ಸಂಬಂಧಿಸಿದ ಅಂಶಗಳು ಅವು. ಇಂಗ್ಲಂಡಂತಹ ದೇಶದಲ್ಲಿ ಹೀಗೆ ನಡೆಯುತ್ತದೆ. ಇತರ ದೇಶಗಳಲ್ಲಿ, ಉದಾ ;— ಅಮೇರಿಕಾ, ಫ್ರಾನ್ಸ್— ರಾಜ್ಯಾಂಗರಚನೆಗೆ ಸಂಬಂಧಿಸಿದ ಕಾನೂನನ್ನು ಬದಲಾಯಿಸಲು ವಿಶೇಷ ವಿಧಾನಗಳೂ, ಕಲಾಪವೂ ಇರುತ್ತವೆ. ಸಿಕ್ಕಿಸಿಕ್ಕಿದವರು ಸಿಕ್ಕಿದ ಹಾಗೆ ರಾಜ್ಯಾಂಗದ ಮೂಲರಚನೆಯನ್ನು ತಾತ್ಕಾಲಿಕ ಆವೇಶಗಳಿಗೆ ಒಳಪಟ್ಟು ಬದಲಾಯಿಸಲು ಅವಕಾಶವಿಲ್ಲದ ಹಾಗೆ ಈ ನಿರ್ಬಂಧಗಳು ಏರ್ಪಟ್ಟಿರುತ್ತವೆ. ಶಾಸನ ಸಭೆಗಳ ಇಷ್ಟು ಮಂದಿ ಪ್ರತಿನಿಧಿಗಳಾದರೂ ಮಾರ್ಪಾಟನ್ನು ಬಯಸಬೇಕು, ಬಹುಮತ ಅಥವಾ ಬಹು ಹೆಚ್ಚು, ಎಂದರೆ ನೂರಕ್ಕೆ ೭೫ ಅಥವಾ ೮೦ ಭಾಗ ಪ್ರಮಾಣ ಇರಬೇಕು, ಇಲ್ಲ ವಾದರೆ ಮಾರ್ಪಾಟು ನಡೆಯಕೂಡದು ಎಂದು ಮುಂತಾಗಿ ನಿಯಮವಿರು ತ್ತದೆ. ಕೆಲವು ದೇಶಗಳಲ್ಲಿ, ಕಡೆಯಲ್ಲಿ, ಎಲ್ಲ ಜನದ ಅಭಿಪ್ರಾಯ ಪಡೆಯ ಬೇಕಾದ ಒಂದು ನಿರ್ಬಂಧವಿರುತ್ತದೆ. ಶಾಸನ ಸಭೆಗಳಲ್ಲಿ ಮಾಡಿದ ನಿರ್ಣಯಗಳಿಗೆ ಜನದ ಒಪ್ಪಿಗೆ ಅಗತ್ಯ. ಇದಕ್ಕೆ 'ರೆಫರೆಂಡಮ್' ಎಂದು ಹೆಸರು. ಇನ್ನು ಕೆಲವು ಕಡೆ ಜನವರ್ಗಗಳವರೇ ಇಂಥ ಶಾಸನಗಳು ಹೀಗೆ ಆಗಬೇಕೆಂದು ಶಾಸನ ಸಭೆಗಳಿಗೆ ಸೂಚಿಸುವ ಪದ್ಧತಿ ಇರುತ್ತದೆ. ಶಾಸನ ಸಭೆಗಳು ಅವಕ್ಕೆ ತಕ್ಕ ರೂಪನ್ನು ಕೊಟ್ಟು ಸರ್ವಜನದ ಹಿತವನ್ನು

ಸಾಧಿಸುವಂತೆ ಅದನ್ನು ಒಂದು ಖಚಿತವಾದ ಆಕಾರಕ್ಕೆ ತರಬೇ
ರಾಜಾಧಿಕಾರಿಗಳು ಅವನ್ನು ನಡಸಿಕೊಡಬೇಕು. ಶಾಸನಗಳು ಹೇ
ವಿಧಾಯಕವಾಗಲಿ, ನಿರ್ಮಾಣವಾಗಲಿ ಅವು ಶಾಶ್ವತವಾಗಿ ಎಲ್ಲರಿ
ಗೊತ್ತಾಗುವಂತೆ ಬರವಣಿಗೆಯಲ್ಲಿ ಇರಬೇಕು. ಅದಕ್ಕೆ ರಾ
ಮುದ್ರೆಯೂ, ಸಹಿಯೂ ಬೀಳತಕ್ಕದ್ದು ಅಗತ್ಯ. ಶಾಸನ ಹುಟ್ಟಿ
ಸಂದರ್ಭ ಹೇಗೆ? ಇದರ ಉದ್ದೇಶವೇನು? ಇದರ ವ್ಯಾಪ್ತಿ ಏನ
ಯಾವುದಕ್ಕೆ ವ್ಯಾಪ್ತಿ ಇಲ್ಲ? ಎಷ್ಟು ಕಾಲ ಆಚರಣೆಯಲ್ಲಿರತಕ್ಕದ್ದು
ಇದನ್ನು ಹೇಗೆ ಮಾತ್ರವೇ ಅರ್ಥ ಮಾಡಬೇಕು? ಎಂಬಂತಹ ಸೂಚ
ಗಳು ಪ್ರತಿ ಶಾಸನದಲ್ಲಿಯೂ ಇರುತ್ತವೆ. ಆ ಶಾಸನದ ಆಚರಣೆಯ
ಜನ ಈ ಅರ್ಥಗಳಿಗೆ ಒಳಪಟ್ಟೇ ನಡೆಯಬೇಕಾಗುತ್ತದೆ. ಆ ಸಂಬಂ
ಗಳಲ್ಲಿಯೇ ನ್ಯಾಯಾಧಿಕಾರಿಗಳೂ, ನ್ಯಾಯವಾದಿಗಳೂ (ಲಾಯರುಗಳ
ಪಕ್ಷಸಾಧನೆ, ನ್ಯಾಯಸಾಧನೆ ಮಾಡತಕ್ಕದ್ದು. ಶಾಸನಕಾರರ ಉದ್ದೇ
ಇಂಥಾದ್ದೇ ಎಂದು ನಿರ್ಣಯಿಸಲು ಈ ಅಂಶವೇ ಸಹಾಯಕ.

೬

ಎಲ್ಲಿ ದೇಶಕ್ಕೆಲ್ಲ ಸಂಬಂಧಿಸಿದ ಎಲ್ಲ ಶಾಸನಗಳನ್ನೂ ಮಾಡುವುದ
ಶಕ್ಯವಿಲ್ಲವೋ ಅಲ್ಲಿ ಸುವ್ಯವಸ್ಥಿತವಾಗಿ ಏರ್ಪಟ್ಟಿರುವ ಇತರ ರಾಜಕೀಯ
ಮಂಡಲಿಗಳು, ಸ್ಥಳೀಯ ಅಧಿಕಾರಿಗಳು, ಉಪನಿಯಮಗಳನ್ನು ಮಾ
ಕೊಳ್ಳಲು ಅವಕಾಶವಿರುತ್ತದೆ. ದೇಶದ ಒಟ್ಟು ಕಾನೂನಿಗೆ ವಿರೋ
ವಾಗದಿದ್ದರೆ ಸರಿ. ಸ್ಥಳೀಯ ಮಂಡಲಗಳಿಗೆ ಬಹುಮಟ್ಟಿನ ಸ್ವಾಧೀನ
ಕೊಡಬಹುದು. ಈ ಎಲ್ಲ ಕಡೆಗಳಲ್ಲಿಯೂ ಕೆಲಸಕಾರ್ಯಗಳು ಸುಸೂತ್ರ
ವಾಗಿ ನಡೆಯುವಂತೆಯೂ, ಒಂದು ಶಿಸ್ತು ನಡೆಯುವಂತೆಯೂ, ಶಿಸ್ತಿ
ವಿಧೇಯತೆ ಸಂಪಾದಿಸುವಂತೆಯೂ ಅವಕಾಶ ಏರ್ಪಡಿಸಿರುತ್ತದೆ. ಎಲ್ಲಿ
ವರೆಗೂ ಇವೆಲ್ಲ ಬದಲಾಗದೆ ಇರುತ್ತವೆಯೋ ಅಲ್ಲಿನವರೆಗೂ

ುವೆಲ್ಲ ನ್ಯಾಯವೇ. ಅವನ್ನನುಸರಿಸಿ ಅಧಿಕಾರಿಗಳು ನಡೆದರೆ ಅವರ
ಡತೆ ನ್ಯಾಯ. ಮೀರಿ ನಡೆದಾಗ ಅವರ ಮೇಲೆ ಕೂಡ ವ್ಯವಹಾರ
ಡಸಬಹುದೆಂಬ ಅವಕಾಶ ದೇಶದ ಕಾನೂನುಗಳಲ್ಲಿ ರಚಿತವಾಗಿರುತ್ತದೆ.
ಾಜನೂ ರಾಜಾಧಿಕಾರಿಗಳೂ, ತಮ್ಮ ಕಾರ್ಯದಿಂದ ಉಂಟಾದ
ಷ್ಟಗಳನ್ನು ತುಂಬಿಕೊಡಲು ಹೊಣೆ ಹೊತ್ತವರು ಎಂಬ ನಡವಳಿಕೆ
ುರುತ್ತದೆ. ಇದು ಪ್ರಜಾರಕ್ಷಣೆಯಲ್ಲಿ ಬಹು ಮುಖ್ಯವಾದ ಒಂದು ಅಂಶ.
ಹಿಂದಿನ ಕಾಲಗಳಲ್ಲಿ ಮತ ಹೆಚ್ಚು ಪ್ರಬಲವಾಗಿದ್ದಾಗಲೂ, ರಾಜ
ೀಯ ಜೀವನವು ಹೆಚ್ಚು ತೊಡಕಾಗಿ ಬೆಳೆಯದೆ ಇದ್ದಾಗಲೂ ಈ ಎಲ್ಲವೂ
ೂಢಿ, ಆಚಾರ ಸಂಪ್ರದಾಯ ಎಂಬ ಹೆಸರಲ್ಲಿ ಇರುತ್ತಿತ್ತು. ಪೂರ್ವಾ
ಕಾರಕ್ಕೆ ದೈವನಿರ್ಮಿತವಾದುದು ಎಂಬವರೆಗೂ ಗೌರವವಿತ್ತು. ಅದಕ್ಕೆ
ರೋಧವಾಗಿ ನಡೆದರೆ ಪಾಪ, ದೈವದ್ರೋಹ ಎಂಬ ಆಕ್ಷೇಪಣೆ
ಸಲ್ಲುತ್ತಿತ್ತು. ಮತದ ಮುಖಂಡರು ನ್ಯಾಯನಿರ್ಣಯ ಮಾಡುತ್ತಿದ್ದರು.
ನ್ಯಾಯವನ್ನು ಮೀರುವುದು ಪಾತಕ ಎಂದಾಗ ನ್ಯಾಯವನ್ನು ಕುರಿತು
ಂದು ಬಗೆಯ ಅಲೌಕಿಕವಾದ ಭಯವೂ ಭಕ್ತಿಯೂ ಇರುತ್ತಿದ್ದುವು.
ಸ್ವರ್ಗ ನರಕಗಳ ಭೀತಿ ಒಂದು ಕಡೆ, ಆಚಾರದ ಕಟ್ಟುಕಟ್ಟಳೆ ಇನ್ನೊಂದು
ಕಡೆ ದೊಡ್ಡ ನಿರ್ಬಂಧಗಳಾಗಿ ಇದ್ದುವು. ಆದ್ದರಿಂದ ಅವನ್ನು ಸಾಮಾನ್ಯ
ಾಗಿ ಜನ ಮೀರುತ್ತಿರಲಿಲ್ಲ. ಮೀರಿದವರಿಗೆ ಸಮಾಜದ ಮನ್ನಣೆ ಇರು
ತ್ತಿರಲಿಲ್ಲ. ಜನದ ನಡುವೆ ಅವರಿಗೆ ಗೌರವದ ಸ್ಥಾನವಿರುತ್ತಿರಲಿಲ್ಲ. ಸಂಪ್ರ
ದಾಯವನ್ನು ಮುರಿದವನು ಪತಿತನೋ, ಭ್ರಷ್ಟನೋ ಆಗುತ್ತಿದ್ದನು.
ಅವನಿಗೆ ಬಹಿಷ್ಕಾರ ಆಗುತ್ತಿತ್ತು. ಇಂದು ಯಾವುದನ್ನು ನ್ಯಾಯ, ಶಾಸನ
ಕಾನೂನು ಎನ್ನುತ್ತೇವೆಯೋ ಅದರಲ್ಲಿ ಈ ಎಲ್ಲ ಅಂಶವೂ ಪರೋಕ್ಷವಾಗಿ
ಸೇರಿ ಕಾರ್ಯ ಮಾಡುತ್ತದೆ. ಆದರೂ ಇವೊತ್ತು ಅದಕ್ಕೆ ಜನದ
ಒಪ್ಪಿಗೆ ಅಗತ್ಯ. ನ್ಯಾಯ, ಶಾಸನ ಎಲ್ಲ ಜನಕ್ಕಾಗಿ, ಆದವು. ಜನದಿಂದ
ಆದವು. ಜನ ತನ್ನ ಪ್ರಯೋಜನಕ್ಕೆ ತಕ್ಕಂತೆ ಅದನ್ನು ಮಾರ್ಪಡಿಸಬಹುದು.

ಜನದ ಹಿತವನ್ನು ಸಾಧಿಸಬೇಕಾದ ಕಾನೂನು ಅನ್ಯಾಯವೆಂದು ತೋರಿ
ಅದನ್ನು ರದ್ದುಮಾಡಿಸುವುದು ಅವರ ಕೈಯಲ್ಲಿದೆ; ಅವರ ಶಕ್ತಿ
ಒಳಪಟ್ಟಿದೆ. ತಮ್ಮ ಬಾಳಿನ ಹಿತವನ್ನು ವಿಸ್ತರಿಸಿಕೊಳ್ಳಲು ತ
ಬೇಕಾದಂತೆ ಕಾನೂನನ್ನು ವಿಸ್ತರಿಸಿಕೊಳ್ಳಬಹುದು; ಇದಕ್ಕೆ ಮಿತಿಯಿ
ಜನದ ಹಿತಕ್ಕಾಗಿ ಕಾನೂನೇ ಹೊರತು, ಜನ ಒಪ್ಪದ ಕಾನೂನು ಎಷ್
ದಿವ್ಯವೆನ್ನಲಿ, ಎಷ್ಟೇ ಪುರಾತನವೆನ್ನಲಿ, ಸಂಪ್ರದಾಯವೆನ್ನಲಿ ಆರ್ಷೇ
ವೆನ್ನಲಿ ಅದಕ್ಕೆ ಅಷ್ಟು ಮಾತ್ರದಿಂದಲೇ ಅವರ ಮೇಲೆ ಅಧಿಕಾರ
ಕೂಡದು; ಬದುಕೂ, ಇವೊತ್ತಿನ ಆಶೆ ಆಕಾಂಕ್ಷೆಗಳೂ ಬರಿಯ ಕಾನೂ
ಗಾಗಿ ಬಲಿಯಾಗಬಾರದು ಎಂಬ ಅಭಿಪ್ರಾಯ ಇಂದಿನದು. ಎಂದ
ಇಂದಿನ ದೃಷ್ಟಿ ಲೋಕದ ವ್ಯವಹಾರ ದೃಷ್ಟಿ; ವಾಸ್ತವಿಕ ಹಿತದೃಷ್ಟಿ
ಕೇವಲ ಮಾನವೀ ದೃಷ್ಟಿ. ಈ ದೃಷ್ಟಿಯ ಹಿಂದೆ ಆಯಾ ಜನ ಯಾವು
ಸರಿ, ಧರ್ಮ ನಯ ಎಂದೊಪ್ಪುತ್ತದೆಯೋ ಆ ಅಂಶವೆಲ್ಲಾ ಕಾರ್ಯಮಾಡ
ತ್ತದೆ. ಹೀಗೆ ಶಾಸನ ಕಾನೂನುಗಳ ಒಂದು ಕಾಲು ಜನರ ಧರ್ಮಬುದ್ಧಿ
ಯಲ್ಲಿ ನಟ್ಟಿದೆ; ಇನ್ನೊಂದು ಕಾಲು ವಾಸ್ತವಿಕ ಪ್ರಯೋಜನಗಳ
ನಟ್ಟು ನಡೆಯುತ್ತಿರುತ್ತವೆ.

ಜನದಂತೆ ಕಾನೂನು;
ಕಾನೂನು ಬೆಳಸಿದಂತೆ ಜನದ ಬದುಕು; ಬಾಳು.



# ನ್ಯಾಯ

೧

ಮನುಷ್ಯನ ಬದುಕು ಎಷ್ಟು ವಿಸ್ತಾರವೋ ಅಷ್ಟು ವಿಸ್ತಾರವಾಗಿ ಇರಬೇಕು ಕಾನೂನು ; ಅದು ಎಷ್ಟು ವಿವಿಧವೋ ಇದೂ ಅಷ್ಟೇ ಬಗೆ ಇರಬೇಕಾದೀತು. ಏಕೆಂದರೆ, ಎಲ್ಲ ಸಂಬಂಧಗಳಲ್ಲಿಯೂ ಎಲ್ಲ ಹೆಸರಿನಲ್ಲಿಯೂ ಒಬ್ಬರಿಂದ ಒಬ್ಬರಿಗೆ ಕಷ್ಟ, ನಷ್ಟ, ಅನ್ಯಾಯ ಉಂಟಾಗಬಲ್ಲವು. ಇವು ಆಗದಂತೆಯೂ ಪ್ರಬಲರಿಂದಲೂ ಬುದ್ಧಿವಂತರಿಂದಲೂ ದುರ್ಬಲರಿಗೂ ಮಂದರಿಗೂ ಎಚ್ಚರಿಕೆಯಿಲ್ಲದವರಿಗೂ ಕಷ್ಟವಾಗದಂತೆಯೂ ನೋಡಿಕೊಳ್ಳುವ ಭಾರ ರಾಜನದು; ಸರ್ಕಾರದ್ದು. ರಾಜ್ಯಾಂಗಕ್ಕೆ ಸಂಬಂಧಿಸುವ ಭಾಗವನ್ನು ಬಿಟ್ಟರೆ ಕಾನೂನನ್ನು ಸ್ಥೂಲವಾಗಿ ಎರಡು ಬಗೆಯಾಗಿ ವಿಂಗಡಿಸಬಹುದು. (೧) **ಸಿವಿಲ್ ಲಾ**—ಇದರಲ್ಲಿ, ಪ್ರಜೆಯಾದವನಿಗೆ ಇರುವ ಹಕ್ಕುಬಾಧ್ಯತೆ ಎಲ್ಲ ಸೇರಿರುತ್ತವೆ. ಆಸ್ತಿ, ಒಪ್ಪಂದ, ಆಸ್ತಿಯ ಹಂಚಿಕೆ; ಇತರರಿಗೆ ತಾನು ಸಂಪಾದಿಸಿದುದನ್ನು ಕೊಡುವ ಬಿಡುವ ಅಧಿಕಾರ; ವ್ಯಾಪಾರ, ಸಂಚಾರ, ಕೈಗಾರಿಕೆ, ಸಂಪಾದನೆ, ಸಮಾಜ ಸಂಸ್ಥೆಗಳ ಕೆಲಸಕಾರ್ಯ; ಬೇಕಾದಲ್ಲಿಗೆ ಹೋಗಿಬರುವ ಮತ್ತು ತನಗೆ ಇಷ್ಟಬಂದುದನ್ನು ಕೊಳ್ಳುವ, ಮಾರುವ, ಕಳಿಸುವ, ತರಿಸಿಕೊಳ್ಳುವ ಅವಕಾಶ; ಅನುಕೂಲವಾದ ವೃತ್ತಿಯಲ್ಲಿ ತನ್ನ ಸುಖವನ್ನೂ ಪ್ರಯೋಜನವನ್ನೂ ಸಂಪಾದಿಸಿಕೊಳ್ಳುವ ಸೌಕರ್ಯ— ಇವಕ್ಕೆಲ್ಲ ಸಂಬಂಧಪಟ್ಟ ಕಾನೂನು ಇದು. ಪ್ರತಿಯೊಬ್ಬನಿಗೂ ಇಂಥ ಹಕ್ಕುಂಟು, ಇಂಥದನ್ನು ಕೊಟ್ಟರೆ ಇಂಥದನ್ನು ತೆರಬೇಕು ಎಂಬ ಬಗೆಗೆ ಅನೇಕ ನಿಯಮ ಶಾಸನ ಏರ್ಪಡುತ್ತವೆ. ಇಲ್ಲವಾದರೆ ಯಾರ ಶಕ್ತಿಸಂಪತ್ತೂ ಬೆಳೆಯಲಾರದು. ಒಬ್ಬರಿಂದ ಒಬ್ಬರಿಗೆ ವ್ಯವಹಾರದಲ್ಲಿ ಅನ್ಯಾಯ ಆಗಬಹುದು. ಆದುದರಿಂದ

ನ್ಯಾಯವನ್ನು ನಿರ್ಣಯಮಾಡುವುದೂ ನಷ್ಟಗಳನ್ನು ತುಂಬಿಕೊಡುವ ಹಕ್ಕುಗಳನ್ನು ಗೊತ್ತುಮಾಡುವುದೂ ಹೇಗೆ ಎಂಬುದನ್ನು ಸಿ ಕಾನೂನು ವರ್ಣಿಸುತ್ತದೆ.

(೨) **ಕ್ರಿಮಿನಲ್ ಲಾ**— ಇದು ಅಪರಾಧಕ್ಕೂ ಘಾತಕತನ ಸಂಬಂಧಿಸಿದ ನ್ಯಾಯ ; ದೇಶದ ಶಾಂತಿ, ಶಿಸ್ತು, ಸುರಕ್ಷಣೆ ಇವಕ್ಕೆ ಭ ಬಾರದಂತೆ ರಾಜ್ಯವನ್ನೂ, ಜನವನ್ನೂ ಕಾಪಾಡುತ್ತದೆ. ಜನರು ತಮ್ಮ ವ ಸಂಪಾದನೆಗಳನ್ನು ತಮ್ಮಲ್ಲಿಯೇ ಇಟ್ಟುಕೊಳ್ಳುವುದಕ್ಕೆ ಅನುಕೂಲವಾ ತ್ತದೆ. ಇದರ ಸಹಾಯದಿಂದ ಅವರ ತನು, ಮನ, ಧನ, ಮಾನಗಳ ಕೆಡದಂತೆ ಉಳಿಸಿಕೊಳ್ಳಬಹುದು. ಇತರರ ಅಪಹಾರ ಕಾರ್ಯಗಳ ದಂಡನೆಗೆ ಈಡುಮಾಡುವ ಅವಕಾಶ ತೋರಿಸುತ್ತದೆ. ದುಷ್ಟರೂ ಮೋ ಗಾರರೂ ಬಲಪ್ರಯೋಗಮಾಡಿ ಸಾಧಾರಣರನ್ನು ಗಾಸಿಗೊಳಿಸುವ ಅ ಯವನ್ನು ತಪ್ಪಿಸುತ್ತದೆ. ನಾಡಿನಲ್ಲಿ ನ್ಯಾಯವಾದ, ನಿಯಮಬದ್ಧವಾ ವರ್ತನೆ ಏರ್ಪಡುವಂತೆ ಮಾಡುತ್ತದೆ. ಇಲ್ಲಿ ಸರ್ಕಾರದ ದಂಡಾಧಿಕಾ ಮುಖ್ಯಸಾಧನ. ದುಷ್ಟಶಿಕ್ಷಣ ಶಿಷ್ಟರಕ್ಷಣ ಇದು ಈ ಭಾಗಕ್ಕೆ ವಿಶೇ ವಾಗಿ ಸಂಬಂಧಿಸಿದ್ದು. ಶಾಂತರೀತಿಯಲ್ಲಿ, ಬಹುಶ್ರಮಪಟ್ಟು ಬಹುಕಾ ದುಡಿದು ಸಂಪಾದಿಸಿದ್ದನ್ನೆಲ್ಲ ದುರ್ಮಾರ್ಗರು ಒಂದು ಕ್ಷಣದ ಸುಲಿಯಬಹುದು; ದುರ್ಬಲರ ಮೇಲೆ ದಾಳಿಮಾಡಿ ಅವರನ್ನು ತುಳಿ ಹಿಂಸೆಗೊಳಿಸಬಹುದು. ಆದುದರಿಂದ ಸಮಾಜದ ಪ್ರತಿನಿಧಿಯಾದ ಸಕಾ ರವು ಸಮಾಜದ ಶಕ್ತಿಯನ್ನೆಲ್ಲಾ ಶಿಕ್ಷೆಯ ರೂಪದಲ್ಲಿ ತಾಳುತ್ತ ಸಾಮಾನ್ಯ ಜೀವನದಲ್ಲಿ ಜನರ ಪರಸ್ಪರ ಬಾಂಧವ್ಯಗಳನ್ನು ಗೊತ್ತುಮಾಡಿ ಯಾವುದರ ಲಕ್ಷಣ ಹೇಗಿದ್ದರೆ ಮಾತ್ರ ಸರಿ, ಹೇಗಿಲ್ಲದಿದ್ದರೆ ನ್ಯಾಯವಲ್ಲ ದಂಡಾರ್ಹ, ಇಂಥದು ದಂಡ, ಇಂಥದು ಶಿಕ್ಷೆ ಎಂದು ಕ್ರಿಮಿನಲ ಕಾನೂನು ವಿವರಿಸುತ್ತದೆ. ಅಷ್ಟೇ ಅಲ್ಲದೆ ಎಲ್ಲರ ನಡತೆಗೂ ಮೇ ನಿಂತು ಜನ ಜನಕ್ಕೆ ನಡುವೆ ನಡೆಯುವ ವ್ಯವಹಾರಗಳನ್ನು ನಿರ್ಧರಿಸ

ತ್ತದೆ. ಒಂದು ಸಮರಸವಾದ, ಅನ್ಯಾಯವಲ್ಲದ, ಅಸಮವಲ್ಲದ ಬದುಕು ದೇಶದಲ್ಲಿ ಶಕ್ಯವಾಗುವಂತೆ ಮಾಡುತ್ತದೆ. ಯಾವುದು ನಡೆದರೂ ಶಾಂತ ರೀತಿಯಲ್ಲಿ ಬಲಪ್ರಕಾಶವಿಲ್ಲದೆ ನಡೆಯುವಂತೆ ನೋಡಿಕೊಳ್ಳುತ್ತದೆ. ಇತರ ರಿಗೆ ಅಪಾಯವೂ ತೊಂದರೆಯೂ ಆಗದ ಹಾಗೆ, ದೇಶಕ್ಕೆ ನಷ್ಟವಾಗದ ಹಾಗೆ, ಸ್ವಂತ ಶಕ್ತಿ ಪುಷ್ಟಿ ಉಂಟಾಗುವ ಹಾಗೆ ಎಲ್ಲರೂ ಬೆಳೆಯಲು ಸಮವಾದ ಅವಕಾಶಗಳನ್ನು ಏರ್ಪಡಿಸಲು ಆವರಣವನ್ನೂ ಅವಕಾಶವನ್ನೂ ಉಂಟುಮಾಡುತ್ತದೆ.

## ವಾದಿ — ಪ್ರತಿವಾದಿ — ಅಪರಾಧಿ

ಸಿವಿಲ್, ಕ್ರಿಮಿನಲ್ ಎರಡರಲ್ಲಿಯೂ ಅನ್ಯಾಯ ಮೋಸ ಕೇಡಿಗತನ ಗಳಿಗೆ ಶಿಕ್ಷೆ ವಿಧಿಸಿದರೂ ಸಿವಿಲ್ ಕಾನೂನು ಸಾಧಾರಣವಾಗಿ ದಿನ ದಿನದ ಸಮಾಜ ವ್ಯವಹಾರಕ್ಕೆ ಸಂಬಂಧಿಸಿದ್ದು. ಅಲ್ಲಿ, ಜನ ತಾವೇ ತಮಗೆ ಅನ್ಯಾಯವಾಗಿದೆಯೆಂದು ದೂರು ತೆಗೆದುಕೊಂಡು ಹೋಗಬೇಕು. ನ್ಯಾಯವಿಚಾರಣೆಗೂ ನಿರ್ಣಯಕ್ಕೂ ತಗಲುವ ಎಲ್ಲ ಖರ್ಚುವೆಚ್ಚಗಳನ್ನು ತಾವೇ ಇಟ್ಟುಕೊಂಡು ತಮ್ಮ ವಾದವನ್ನು ಸ್ಥಾಪಿಸುವ ಪ್ರಯತ್ನ ಮಾಡಬೇಕು. ತಮ್ಮ ಆಪಾದನೆ ಸರಿಯಲ್ಲವೆಂದು ಗೊತ್ತಾದರೆ ಪ್ರತಿವಾದಿ ಗಳಿಗೆ ತಗಲುವ ವೆಚ್ಚವನ್ನೆಲ್ಲ, ಆದ ನಷ್ಟವನ್ನೆಲ್ಲ ಕಟ್ಟಿಕೊಡಬೇಕು. ಈ ಕಾನೂನಿನ ಪ್ರಕಾರ ವಾದಿ ಪ್ರತಿವಾದಿಗಳು ಖಾಸಗಿ ಜನ; ಸ್ವತಂತ್ರರು. ತಮ್ಮ ವ್ಯವಹಾರವನ್ನು ಸರ್ಕಾರದ ವರೆಗೆ ತೆಗೆದುಕೊಂಡು ಹೋಗಬೇಕಾ ಗಿಯೇ ಇಲ್ಲ. ಸರ್ಕಾರದ ಕೈವಾಡವಿರದ ಅನೇಕ ರೀತಿಗಳಲ್ಲಿ ಕೊಡುವ ಬಿಡುವ, ಮತ್ತು ಕೆಲಸ ಮಾಡುವ, ಮಾಡದಿರುವ ಸಂಬಂಧಗಳನ್ನು ತಮ್ಮ ತಮ್ಮಲ್ಲಿ ಒಪ್ಪಿಕೆಯಿಂದ ಕಲ್ಪಿಸಿಕೊಳ್ಳುತ್ತಾರೆ. ಖಾಸಗಿಯಾಗಿ ಮಧ್ಯಸ್ಥ ಗಾರರ ಮೂಲಕವಾಗಿಯೋ, ಇತರ ನಾಲ್ವರ ಸಹಾಯದಿಂದಲೋ ತೀರ್ಮಾನವಾಗಲಾರದ ನ್ಯಾಯವನ್ನು ದೇಶದ ನ್ಯಾಯಸ್ಥಾನಗಳಿಗೆ ತಂದು ಅಲ್ಲಿ ನಿರ್ಣಯವನ್ನು ಮಾಡಿಸಿಕೊಳ್ಳುತ್ತಾರೆ. ಇತರ ನ್ಯಾಯಗಾರರಿ

ಸರ್ಕಾರದ ನ್ಯಾಯಸ್ಥಾನ ಮೇಲ್ಪಟ್ಟದ್ದು ಎಂದು ಒಪ್ಪಿಕೊಂಡು ದೂ
ಗಳನ್ನು ಅಲ್ಲಿಗೆ ತರುತ್ತಾರೆ ಎಂದು ಇದಕ್ಕೆ ಅರ್ಥ. ಆ ದೂರುಗಳ
ಸರ್ಕಾರವು ಕೇಳುವಂತೆ, ಅದು ವಿಧಿಸುವಂತಹ ಕಾಗದ, ಪ
ಒಡಂಬಡಿಕೆಗಳನ್ನು ಮಾಡಿಕೊಂಡಿದ್ದು ಅದರ ಸೂಚನೆಯಾಗಿ ಸರ್ಕಾ
ರೆಜಿಸ್ಟ್ರೇಷನ್ ಕಚೇರಿಗಳಲ್ಲಿ ಆ ಕಾಗದ ಪತ್ರಗಳನ್ನು ಪ್ರತಿ ಮಾಡಿಸಿಟ್ಟಿ
ತ್ತಾರೆ. ನ್ಯಾಯಸ್ಥಾನಗಳಲ್ಲಿ ಅಂಥವು ಮಾತ್ರ ಊರ್ಜಿತವಾಗುವು
ನ್ಯಾಯಸ್ಥಾನಗಳಲ್ಲಿ ಸರ್ಕಾರದವರು ನೇಮಿಸಿರುವ ನ್ಯಾಯಾಧಿಕಾರಿಗ
ಎರಡು ಕಡೆಯ ವಾದಗಳನ್ನೂ ಸಾವಧಾನವಾಗಿ, ಪಕ್ಷಪಾತವಿಲ್ಲದೆ ಕೇ
ತ್ತಾರೆ. ಎರಡು ಕಡೆಯ ಸಾಕ್ಷಿ ಪ್ರಮಾಣಗಳನ್ನೂ ವಾದಗಳನ್ನೂ ಕೇ
ನೋಡಿ, ತಿಳಿದು ವಿಚಾರಣೆ ಮಾಡುತ್ತಾರೆ. ವಿಷಯಕ್ಕೆ ಸಂಬಂಧಿಸಿ
ಅಂಶಗಳನ್ನೂ ಕಾನೂನಿಗೆ ಸಂಬಂಧಿಸಿದ ಅಂಶಗಳನ್ನೂ ಪೂರ್ತಿಯಾಗಿ ಪ
ಶೀಲಿಸುತ್ತಾರೆ. ಬಳಿಕ ಯಾರದು ಸರಿ, ಎಷ್ಟು ಸರಿ ಎಂಬುದನ್ನು ನಿರ್ಣ
ಮಾಡುತ್ತಾರೆ. ನ್ಯಾಯವನ್ನು ಅನುಸರಿಸಿ ಕಡೆಯ ನ್ಯಾಯಸ್ಥಾನಗಳ
ಯಾವುದು ತೀರ್ಮಾನವಾಗುತ್ತದೆಯೋ ಅದು ಕಡ್ಡಾಯವಾಗಿ ನಡೆಯ
ವಂತೆ ಸರ್ಕಾರದ ಅಧಿಕಾರಿವರ್ಗ ಸಹಾಯ ಒದಗಿಸುತ್ತದೆ. ಈ ಸೇ
ಮಾಡಿಕೊಡುವುದಕ್ಕೆ ರುಸುಮು ತೆರಬೇಕು. ಇಂಥಿಂಥ ವ್ಯವಹಾರಕ
ಇಷ್ಟಿಷ್ಟು ರುಸುಮು ಎಂಬುದು ಮೊದಲೇ ನಿರ್ಧರವಾಗಿರುತ್ತದ

ಕ್ರಿಮಿನಲ್ ಕಾನೂನಿನಲ್ಲಿ ದೃಷ್ಟಿ ಬೇರೆ. ಘಾತಕರು, ಕೇಡಿಗರ
ಸಮಾಜದ ಒಟ್ಟು ಸುರಕ್ಷಣೆಯನ್ನು ಮುರಿಯುವವರು. ಆದ್ದರಿಂ
ಅಲ್ಲಿ ಯಾವ ಕೇಡು ಉಂಟಾದರೂ ಅಪರಾಧಿಗಳನ್ನು ಗೊತ್ತುಹಚ್ಚು
ವುದೂ ಹಿಡಿಯುವುದೂ ಶಿಕ್ಷಿಸುವುದೂ ಸರ್ಕಾರದ ಮತ್ತು ರಾಜನ
ಮೊದಲ ಕೆಲಸ.* ಆದುದರಿಂದ ಅಪರಾಧಿಗಳನ್ನೂ ಅಪರಾಧವನ್ನೂ

* ಈ ಬಗ್ಗೆ ಎಲ್ಲರೂ ಸರಕಾರಕ್ಕೆ ಎಲ್ಲ ಸಹಕಾರವನ್ನೂ ಕೊಡಲೇ ಬೇಕು. ಅಪರಾಧಿ
ಗಳಿಗೆ ನೆರವಾದವರೂ ಸರಕಾರಕ್ಕೆ ನೆರವು ಕೊಡದವರೂ ದಂಡನೆಗೆ ಅರ್ಹರು.

ಗೊತ್ತಿಗೆ ಹಚ್ಚಿ ಶಿಕ್ಷಿಸುವ ಖರ್ಚುವೆಚ್ಚವೆಲ್ಲ ಸರ್ಕಾರದ್ದು. ಕೇಡು ಒಟ್ಟು ಸಮಾಜಕ್ಕೆ. ಕೇಡಿಗತನ ಹೆಚ್ಚಿದರೆ ಸಮಾಜದಲ್ಲಿ ಯಾರಿಗೂ ಶಾಂತಿ, ಸುರಕ್ಷಣೆ ಇಲ್ಲ. ಆದ್ದರಿಂದ ಸಮಾಜವನ್ನು ಕಾಪಾಡಬೇಕಾಗಿರುವ ರಾಜನೂ ರಾಜಭೃತ್ಯರೂ ಈ ಕೆಲಸವನ್ನು ನೇರವಾಗಿ ಕೈಗೊಳ್ಳುವರು. ಕೇಡು ನಡೆಯದ ಹಾಗೆ ನೋಡಿಕೊಳ್ಳುವುದು, ನಡೆದಾಗ ಗೊತ್ತು ಹಚ್ಚುವುದು; ಕೇಡಿಗರನ್ನು ನ್ಯಾಯಸ್ಥಾನಗಳಿಗೆ ನಿರ್ಬಂಧದಲ್ಲಿ ಕರೆದೊಯ್ಯುವುದು, ಅವರು ತಪ್ಪಿಸಿಕೊಳ್ಳದ ಹಾಗೆ ನಿರ್ಬಂಧದಲ್ಲಿಡುವುದು, ಅಪರಾಧವನ್ನು ಸ್ಥಾಪಿಸುವ ಪ್ರಮಾಣಗಳನ್ನು ಕೂಡಿಸಿ ನ್ಯಾಯಸ್ಥಾನಗಳಲ್ಲಿ ಪ್ರಮಾಣಗಳ ಸಹಾಯದಿಂದ ಅಪರಾಧವನ್ನು ಸ್ಥಾಪಿಸುವುದು, ದುಷ್ಟರು ಶಿಕ್ಷೆಗೆ ಈಡಾಗುವಂತೆ ಏರ್ಪಡಿಸುವುದು, ಇಂಥವರಿಂದ ಯಾವ ಭಯವೂ ಇನ್ನು ಮುಂದೆ ಜನಕ್ಕೆ ಇಲ್ಲದಂತೆ ನೋಡಿಕೊಳ್ಳುವುದು— ಇವೆಲ್ಲ* ಸರ್ಕಾರದ ಕೆಲಸವೇ. ಸರ್ಕಾರವೇ ಇಲ್ಲಿ ವಾದಿ. ಆಪಾದಿತನು ಪ್ರತಿವಾದಿ. ಇಲ್ಲಿಯೂ ಎರಡು ಕಡೆಯ ವಾದವನ್ನು ಕೇಳುವರು; ಸಾಕ್ಷಿ ಪ್ರಮಾಣ ಒದಗಿಸುವರು; ವಿಚಾರಣೆ ನಡಸುವರು; ಕೆಳಗಿನ ನ್ಯಾಯಸ್ಥಾನಗಳಲ್ಲಿನ ತೀರ್ಮಾನವು ಸಮರ್ಪಕವಲ್ಲವೆಂದು ವಾದಿಸುವ ಅವಕಾಶವನ್ನು ಆಪಾದನೆ ಹೊತ್ತವನಿಗೆ ಕೊಡುವರು. ದೊರೆಯವರೆಗೆ ದೂರು ಎಂಬಂತೆ— ಮೇಲಿನ ನ್ಯಾಯಸ್ಥಾನಗಳಿಗೆ ಮೊರೆ ತೆಗೆದುಕೊಂಡು ಹೋಗಲು ಬಿಡುವರು. ದೇಶದ ಅತಿ ಉನ್ನತ ನ್ಯಾಯಸ್ಥಾನದಲ್ಲಿ ಅವನ ಮೇಲೆ ಅಪರಾಧ ಹೊತ್ತರೆ ಆಗ ಆ ವಿವರಕ್ಕೆ ತಕ್ಕಂತೆ ಶಿಕ್ಷೆ ನಿರ್ಣಯವಾಗುವುದು. ಸಿವಿಲ್ ವಾದಗಳಲ್ಲಿ ಹೇಗೆಯೋ ಈ ವಾದಗಳಲ್ಲಿಯೂ ಹಾಗೆಯೇ ಆಪಾದನೆ ಸತ್ಯವೆಂದು ಸ್ಥಾಪಿಸುವ ಭಾರ ವಾದಿಗಳದು. ಅಲ್ಲಿ ವಾದಿಯ ಸ್ವಂತ

---

* ಹಿಂದೆ ಶಿಕ್ಷೆ ಪಡೆದ ಅಪರಾಧಿಗಳ ಹೆಸರುಪಟ್ಟಿ, ನೆಲೆ ಇವನ್ನು ಗೊತ್ತುಮಾಡಿ ಅವರು ಹೀಗೆ ಹೀಗೇ ಇರಬೇಕೆಂದು ಅಪ್ಪಣೆ ಮಾಡಿರುತ್ತಾರೆ. ಇಂಥ ಬಗೆಯ ಕೇಡು ಉಂಟಾದರೆ ಇಂಥಿಂಥವರಿಂದಲೇ ಸುಮಾರು ನಡೆದಿರಬಹುದೆಂಬ ಊಹೆ ಇರುವುದರಿಂದ ಅವರ ಸುಳಿವು, ಸಂಚಾರ, ಅವರ ಸಂಗಡಿಗರ ನಡತೆ—ಇವನ್ನು ಕಣ್ಣಿಗೆ ತಂದುಕೊಳ್ಳುತ್ತಲೇ ಇರುತ್ತಾರೆ.

ಖರ್ಚು, ಇಲ್ಲಿ ಸರ್ಕಾರದ್ದು. ದೂರು ಸರಿ ಎಂದು ನಿರ್ಣಯವಾಗಿ ಅ
ಮೇಲೆ ಹೊರುವ ವರೆಗೂ ಪ್ರತಿವಾದಿ ತಪ್ಪಿತಸ್ಥನಲ್ಲ. ಅಪರಾಧಿ ಬಡವನ
ಸ್ವಂತ ಸಾಕ್ಷಿ ಪ್ರಮಾಣಗಳನ್ನೂ, ಇತರ ಸಹಾಯಗಳನ್ನೂ ತಂದುಕೊಳ್ಳ
ಅಸಮರ್ಥನಾಗಿದ್ದರೆ ಸರ್ಕಾರದವರೇ ಆ ಅನುಕೂಲಗಳನ್ನು ಕ
ಸುವರು. ಎಂದರೆ, ಅಪರಾಧಿ ತಾನು ನಿರ್ದೋಷಿ ಎಂದು ಸ್ಥಾ
ಕೊಳ್ಳಲು ಬೇಕಾದ ಎಲ್ಲ ಅವಕಾಶಗಳನ್ನು ಏರ್ಪಡಿಸಿಕೊಡುವ ಹೊ
ಯನ್ನು ಕೂಡ ಹೊರುತ್ತಾರೆ. ಕಡೆಯಲ್ಲಿ ಅಪರಾಧ ಹೊರುವ ವರೆ
ಅವನು ನಿರ್ದೋಷಿ ಎಂದೇ ಭಾವಿಸುತ್ತಾರೆ. ಆ ಭಾವನೆ ಪ್ರತಿ ಪ್ರಜೆ
ಹಕ್ಕು. ಕ್ರಿಮಿನಲ್ ಭಾಗಗಳಲ್ಲಿ ತನ್ನ ಮೇಲೆ ಹೊತ್ತ ಆಪಾದನೆ ಸು
ದೆಂದು ಪ್ರತಿವಾದಿ ಸ್ಥಾಪಿಸಬೇಕು. ಸಿವಿಲ್ ಭಾಗದಲ್ಲಿ ತಾನು ಹೇಳು
ತಪ್ಪು ನಡೆದಿದೆಯೆಂದು ವಾದಿ ಸ್ಥಾಪಿಸಬೇಕು. ಇಲ್ಲವಾದರೆ ಪ್ರತಿವಾದಿ
ವೆಚ್ಚವನ್ನು ಕಟ್ಟಿಕೊಡಬೇಕು. ಆ ನಡುವೆ ಈತನಿಗೆ ಮಾನ ನಷ್ಟಾದಿಗಳ
ಆದರೆ ಆ ಕಷ್ಟ ನಷ್ಟಗಳಿಗೆಲ್ಲ ಈತನು ಹೊಣೆಗಾರ.

ಬರಿಯ ಸಂಶಯದ ಮೇಲೆ ಯಾರನ್ನು ಹಿಡಿದು ನಿರ್ಬಂಧಿಸುವುದ
ಸಾಮಾನ್ಯವಾಗಿ ತಪ್ಪು. ಅವಸರ ಸಮಯದಲ್ಲಿ ಹಾಗೆ ಮಾಡಬೇಕಾದಾ
ಮ್ಯಾಜಿಸ್ಟ್ರೇಟರಿಂದ ಒಂದು ಅಧಿಕಾರ ಪತ್ರವನ್ನು (ವಾರಂಟ್) ತಂದ
ತೋರಿಸಬೇಕು. ಎಚ್ಚರಿಕೆಯಿಲ್ಲದೆ ಯಾರೂ ಬಹುಕಾಲ ನಿರ್ಬಂಧದಲ್ಲಿ
ಕೊಳೆಯದಂತೆ ಬೇರೆ ನೋಡಿಕೊಳ್ಳುತ್ತಾರೆ. ಒಂದೆರಡು ತೀಕ್ಷ್ಣ ಸಮಯ
ಗಳಲ್ಲಿ ಬಿಟ್ಟರೆ ಉಳಿದ ಸಮಯದಲ್ಲಿ 'ಅಪರಾಧಿಯೆಂದು ಹಿಡಿದವನನ್ನು
ಇನ್ನೊಬ್ಬರ ಅಥವಾ ಹಣದ ಹೊಣೆಗಾರಿಕೆ ಮೇಲೆ ಬಿಡುಗಡೆ ಮಾಡ
ತ್ತಾರೆ. ಇದಕ್ಕೆ 'ಬೆಯ್ಲ್' ಎಂದು ಹೆಸರು. ರಾಜದ್ರೋಹದಲ್ಲಿಯೋ
ಜನದಲ್ಲಿ ದೊಂಬಿ' ಅಶಾಂತಿ ಪ್ರಬಲಿಸೀತು ಎಂಬ ಕಾರಣದಿಂದಲೋ
ಯಾರನ್ನಾದರೂ ವಿಚಾರಣೆಯಿಲ್ಲದೆ ನಿರ್ಬಂಧಿಸಿದ ಸಂದರ್ಭದಲ್ಲಿ ಕೂ
ಅವರ ಕಡೆಯವರು ನ್ಯಾಯಸ್ಥಾನಗಳಿಗೆ ದೂರು ಹೇಳಿ ಅವರನ್ನು

ವಿಚಾರಣೆಗೆ ಗುರಿಪಡಿಸಿರೆಂದು ಕೇಳುವ ಹಕ್ಕಿರುತ್ತದೆ. ಆ ಹಕ್ಕಿನಂತೆ ಎಷ್ಟೋ ಸಲ ಸರಕಾರದ ನಿರ್ಬಂಧವೂ ನಡತೆಯೂ ಸರಿಯಲ್ಲವೆಂದು ನ್ಯಾಯಾಧೀಶರು ತೀರ್ಮಾನ ಕೊಡುವುದುಂಟು.

**ಕೋಡ್—ವಿಧಾನ**

ಈ ಎಲ್ಲ ವಿವರಗಳನ್ನು ಕುರಿತೂ ಕಾನೂನು ಗೊತ್ತಾಗಿ, ಶಾಸನ ಬರಹರೂಪದಲ್ಲಿ ಒಂದು ಕಡೆ ಕೂಡಿಸಿ (ಕೋಡ್) ಇರುತ್ತದೆ. ವ್ಯವಹಾರ ವಿಧಾನಗಳು ಹೀಗೆ ಹೀಗೆ ಆದರೆಯೇ ಸಮರ್ಪಕ ಎಂದು (ಪ್ರೊಸೀಜರ್) ವಿಧಾನ ಗೊತ್ತಾಗಿರುತ್ತದೆ. ಬರೆದ ಶಾಸನ, ಕಾರ್ಯವಿಧಾನ, ನ್ಯಾಯನಿರ್ಣಯವಿಧಾನ, ನ್ಯಾಯಸ್ಥಾನಗಳಲ್ಲಿ ನಡವಳಿಕೆ, ಅಲ್ಲಿನ ತೀರ್ಮಾನ ಇವೆಲ್ಲ ಒಟ್ಟಿಗೆ ಸೇರಿ ದೇಶದ ನ್ಯಾಯಮಂಡಲ ವಾಗುವುದು. ನ್ಯಾಯದ ದೃಷ್ಟಿಯಲ್ಲಿ ಎಲ್ಲರೂ ಸಮ. ಬಡವರು ಸಿರಿ ವಂತರು, ಗಂಡು ಹೆಣ್ಣು, ಚಿಕ್ಕವರು ದೊಡ್ಡವರು, ಈ ಕುಲ ಆ ಕುಲ, ಆಳುವವ ಪ್ರಜೆ, ಅಧಿಕಾರಿ ಸಾಮಾನ್ಯ ಎಂಬ ಭೇದ ಬಾರದಂತೆಯೂ ಕಾನೂನು ಸಮವರ್ತಿಯಾಗಿರುವಂತೆಯೂ ಮುಂದುವರಿದ ಎಲ್ಲ ದೇಶಗಳ ಲ್ಲಿಯೂ, ಧರ್ಮಿಷ್ಠವಾದ ಎಲ್ಲ ಸರಕಾರಗಳೂ ಏರ್ಪಡಿಸುವುವು. ರಾಜ್ಯಾಂಗಕ್ಕೆ ಸಂಬಂಧಿಸಿದ ಶಾಸನದಲ್ಲಿ ನ್ಯಾಯನಿರ್ಣಯ ಸುಮಾರು ಹೇಗೆ ಎಂದು ತಿಳಿಸಿದೆವು. ಇಲ್ಲಿಯೂ ಹಾಗೇ : ನ್ಯಾಯ, ಶಾಸನ, ಇವೇ ಎಲ್ಲಕ್ಕೂ ಮೇಲ್ಪಟ್ಟ ಅಧಿಕಾರಿ. ಅವಕ್ಕೆ ಒಳಪಟ್ಟು ಉಳಿದ ಜನ, ಮನ, ರಾಜ, ಭೃತ್ಯ, ನಡವಳಿಕೆ. ಅದರೆದುರು ಯಾರೂ ನಿಲ್ಲಲಾಗದು. ಯಾವ ಪಕ್ಷಪಾತವನ್ನೂ ಸರಕಾರ ವಹಿಸದಂತೆ, ಕಡೆಗೆ ರಾಜನಿಂದಲೂ ಸರ್ಕಾರ ದಿಂದಲೂ ಜನಕ್ಕೆ ಪೀಡೆ, ಕಷ್ಟ ನಷ್ಟ ಉಂಟಾಗದಂತೆ, ನ್ಯಾಯವು ಏರ್ಪಡಿಸುತ್ತದೆ. ಬೇರೆ ದೇಶಗಳೊಡನೆ ವ್ಯಾಪಾರ, ವ್ಯವಹಾರ, ಸಂಪರ್ಕ ಇರುವಲ್ಲಿ ಆ ದೇಶಗಳವರಿಗೂ ಅನುಕೂಲ ದೊರೆಯುವಂತೆಯೂ ಅನ್ಯಾಯ, ನಷ್ಟ ಆಗದಂತೆಯೂ ಶಾಸನಗಳು ಹುಟ್ಟುವುವು. ಸ್ವದೇಶಿ,

ವಿದೇಶಿ ಎಂಬ ಮಾತುಗಳು ಮನುಷ್ಯರ ಚರಿತ್ರೆಯಲ್ಲಿ ಬಹು ದೊಡ್ಡ ಪಕ್ಷ ಗಳನ್ನೂ ವಿರೋಧಗಳನ್ನೂ ಹುಟ್ಟಿಸಿವೆ. ಇವರಿಗೇ ಒಂದು ಬಗ ಶಾಸನ, ಅವರಿಗೆ ಬೇರೊಂದು ಬಗೆಯ ವಿವೇಚನೆ ಇರುವು ಸಹಜ. ಆದರೆ ಯಾವ ದೇಶದಲ್ಲಿ ಎರಡು ಬಗೆಯವರಿಗೂ ಸುವಾ ಒಂದೇ ನಯದ ಶಾಸನ, ಶಿಸ್ತು, ಸೌಲಭ್ಯ ಸೌಕರ್ಯ, ಹಕ್ಕು ಹೊ ನ್ಯಾಯಾವಕಾಶ, ಧಾರಾಳ ಉಳ್ಳ ಕಾನೂನು ಪ್ರಬಲಿಸಿರುತ್ತದೆಯೋ ದೇಶಗಳು ವ್ಯವಹಾರಜೀವನದಲ್ಲಿ ಬಹು ಮುಂದೆ ಹೋಗಿವೆ ಎ ಬಹುದು. ನಮ್ಮ ದೇಶದಂತಹ ದೇಶದಲ್ಲಿ ಒಂದು ಕಾಲದ "ಸ್ವದೇಶೋ ಭುವನತ್ರಯಂ" (ಮೂರು ಲೋಕಗಳೂ ನಮಗೆ ಸ್ವದೇ ಎಂದುದುಂಟು. "ಯೂಸ್ ಗೆಂಟಿಯುಂ" ಎಂಬ ಒಂದು ಬಗೆ ರೋಮನ್ ಜನರ ನ್ಯಾಯಶಾಸನ ವಿದೇಶಗಳವರ ಸಂಪರ್ಕವನ್ ವಿವರವನ್ನೂ ರೋಮನರಲ್ಲದವರ ಸೌಕರ್ಯವನ್ನೂ ಸಾಧಿಸಿಕೊಡು ಕಾನೂನಾಗಿತ್ತು. ಪರದೇಶಿ ವ್ಯಕ್ತಿ ಸಂಸ್ಥೆಗಳ ಪರವಾಗಿ ಒಂದು ದೇಶ ವರು ಹಿತವಾಗಿ ನಡೆದುಕೊಂಡಾಗ ಮಾನವ ವ್ಯವಹಾರ ನೀತಿಯಲ್ಲಿ ಒಂದು ದೊಡ್ಡ ಹೆಜ್ಜೆ ಮುಂದಿಟ್ಟು ಸಾಧಿಸಿದಂತಾಯಿತು. ನ್ಯಾಯ ತತ್ವ ವಿಸ್ತರಣವು ರಾಷ್ಟ್ರ ರಾಷ್ಟ್ರಗಳ ಸಂಬಂಧದಲ್ಲಿ ಬೆಳೆಯುವ ಶಾಸ ವ್ಯವಸ್ಥೆಗಳನ್ನು ರೂಪಿಸಲು ಸಹಕಾರಿಯಾಯಿತು.

## ನ್ಯಾಯಸ್ಥಾನಗಳ ರಚನೆ, ರೀತಿ; ಅಪ್ಪೀಲ್

ನ್ಯಾಯಸ್ಥಾನಗಳಲ್ಲಿ ನ್ಯಾಯನಿರ್ಣಯ ಸಮರ್ಪಕವಾಗಿ ನಡೆಯಲು ನ್ಯಾಯಸ್ಥಾನಗಳ ರಚನೆಯೂ, ನ್ಯಾಯಾಧಿಕಾರಿಗಳ ನೇಮನಿಯಮವೂ ಅವರ ಸ್ಥಾನ, ಮಾನ, ಅಧಿಕಾರಗಳ ಗೊತ್ತುಗಡೆಯೂ, ಪ್ರತಿ ನ್ಯಾಯ ಸ್ಥಾನದಲ್ಲಿಯೂ ನ್ಯಾಯನಿರ್ಣಯದ ವಿಧಾನವು ಈ ಪ್ರಕಾರದಲ್ಲಿಯೇ ನಡೆದ ಹೊರತು ನ್ಯಾಯವಲ್ಲ ಎಂಬ ವ್ಯವಸ್ಥೆಯೂ ಇರುತ್ತವೆ ಎಂದೆವು

ಕಾನೂನಿನ ಜೊತೆಗೆ ಇಂತಹ ವ್ಯವಸ್ಥೆ ಬಹು ಮುಖ್ಯ. ನ್ಯಾಯನಿರ್ಣಯ ಪ್ರಸಂಗದಲ್ಲಿ ಯಾವ ಬಗೆಯ ಲೋಪ, ದೋಷ, ನಿರ್ಬಂಧ ಇದ್ದರೂ ಅದರಿಂದ ಸರಿಯಾದ ನಿರ್ಣಯಕ್ಕೆ ಅಡಚಣೆಯುಂಟು. ಅಂಥವನ್ನು ಅರಿತು ಅವನ್ನೆಲ್ಲ ಶಾಸನ ಮೂಲಕವಾಗಿಯೋ ವಿಧಾನಗಳ ಪರಿಷ್ಕರಣದ ಮೂಲಕವೋ ತಿದ್ದಲು ಪ್ರಯತ್ನ ನಡೆದಿರುತ್ತದೆ. ಕಾನೂನಿನ ಲೋಪ ದೋಷಗಳ ಎಲ್ಲ ಅವಕಾಶವನ್ನೂ ಅಪರಾಧಿಗಳು ದುರುಪಯೋಗಪಡಿಸಿ ಕೊಳ್ಳುವರು. ಇಂತಹ ಪ್ರವೃತ್ತಿ ಜನಗಳಿಗೆ ಇದೆ. ಇದರಿಂದ ನ್ಯಾಯ ವಿವೇಚನೆ ಕೆಡುವುದು. ಆದುದರಿಂದ ಈ ನಿರ್ಣಯವಿಧಾನಗಳು ಕಾಲ ದಿಂದ ಕಾಲಕ್ಕೆ ಪರಿಷ್ಕಾರವಾಗುತ್ತ ಬಂದಿವೆ. ಇವನ್ನೆಲ್ಲ "ಪ್ರೊಸೀಜರ್ ಕೋಡ್"—ಕಾನೂನಿನ ಪ್ರಯೋಗ ಅಥವಾ ಕಾರ್ಯವಿಧಾನಕಾಂಡ— ಎನ್ನುತ್ತಾರೆ. ಸಿವಿಲ್ ವ್ಯವಹಾರದಲ್ಲಿ ಒಂದು ಬಗೆಯ ನ್ಯಾಯಸ್ಥಾನ ಗಳೂ, ಕ್ರಿಮಿನಲಿಗೆ ಬೇರೆ ಬಗೆಯವೂ ರಚಿತವಾಗಿರುತ್ತವೆ. ಆ ಎರಡು ಭಾಗಗಳಲ್ಲಿಯೂ ಬೇರೆಬೇರೆಯಾಗಿ ಒಂದಕ್ಕೆ ಮೇಲ್ಪಟ್ಟ ಅಧಿಕಾರ ಮಂಡಲ ಇನ್ನೊಂದು—ಇದಕ್ಕೂ ಮೇಲ್ಪಟ್ಟ ದೇಶದ ಅತ್ಯುನ್ನತ ನ್ಯಾಯಸ್ಥಾನ ಬೇರೊಂದು—ಇರುತ್ತವೆ. ಕೆಳಗಿನ ನ್ಯಾಯಸ್ಥಾನಗಳಲ್ಲಿ ಸರಿಯಾದ ತೀರ್ಮಾನ ಆಗಲಿಲ್ಲವೆಂದು ತೋರಿದವರು ಅಲ್ಲಿಗೆ ಮೇಲ್ಪಟ್ಟ ಮಂಡಲಕ್ಕೆ ಮೊರೆಯಿಡುವರು. ಮತ್ತೊಂದು ಸಲ ತಮ್ಮ ಪರವಾಗಿ ವಾದಗಳನ್ನು ಬೆಳಸಿ ಅಗತ್ಯವಾದ ಸಾಕ್ಷಿ ಪ್ರಮಾಣಗಳನ್ನು ಒದಗಿಸುವರು. ಆ ಮೂಲಕ ಹಿಂದಿನ ತೀರ್ಮಾನವನ್ನು ಬೇರ್ಪಡಿಸಿಕೊಳ್ಳಲು ಅವಕಾಶ ವಿರುತ್ತದೆ. ಅಲ್ಲಿಯೂ ವಿರೋಧ ತೀರ್ಮಾನ ಬಂದಾಗ ದೇಶದ ಅತ್ಯುನ್ನತ ನ್ಯಾಯಮೂರ್ತಿಗಳ ಬಳಿಗೆ ವ್ಯವಹಾರವನ್ನು ಒಯ್ಯಬಹುದು. ಅಲ್ಲಿನ ತೀರ್ಮಾನವೇ ಕಡೆಯ ತೀರ್ಮಾನ. ಅಲ್ಲಿ ನ್ಯಾಯಾಧೀಶರಲ್ಲಿ ಅಭಿಪ್ರಾಯ ಭೇದ ಉಂಟಾದರೆ ಕಾರ್ಯ ಹೀಗೇ ನಡೆಯಬೇಕು ಎಂಬ ವ್ಯವಸ್ಥೆ ಇರುತ್ತದೆ.

ಕೆಲಕೆಲವು ನ್ಯಾಯಸ್ಥಾನಗಳು ಕೆಲಕೆಲವೇ ವ್ಯವಹಾರಗಳನ್ನು ಯುವ ಅಧಿಕಾರವುಳ್ಳವು. ಆ ಅಧಿಕಾರವನ್ನು ಮೀರದೆ ಕೆಲಸ ನಡೆ ಬೇಕು. ಕ್ರಿಮಿನಲ್ ವ್ಯವಸ್ಥೆಯಲ್ಲಿ ಬಹು ದೊಡ್ಡ ಅಪರಾಧಗ ಎಂದರೆ, ನರಹತ್ಯ, ರಾಜದ್ರೋಹ, ದೇಶದ್ರೋಹ, ಧರ್ಮದ್ರೋಹ ಈ ನಾಲ್ಕು. ಇವಕ್ಕೆ ಶಿಕ್ಷೆ ಅತಿ ಕಠಿಣ. ಇಲ್ಲಿ ಅಪರಾಧನಿರ್ಣಯ ಬ ವಿಚಕ್ಷಣೆಯಿಂದ ನಡೆಯಬೇಕು. ಅಪರಾಧಿಗೆ ಆಗುವ ಶಿಕ್ಷೆ ಉಗ್ರವಾದು ಆದ್ದರಿಂದ ಎಷ್ಟೋ ಬಗೆಯ ಹಿಡಿತಗಳೂ, ನಿರ್ಬಂಧ ಹೊಣೆಗಾರಿಕೆಗಳ ನ್ಯಾಯಸ್ಥಾನಗಳ ಮೇಲೆ ಇರುತ್ತವೆ. ಈ ಸಂಬಂಧದಲ್ಲಿಯೂ ಕೆಳಗಿ ನ್ಯಾಯಸ್ಥಾನಗಳಿಂದ ಮೇಲಿನವಕ್ಕೆ ಮೊರೆಯುಂಟು. ಎಲ್ಲಕ್ಕೂ ಮೇಲ್ಪ ಅಧಿಕಾರಿಗಳಲ್ಲಿ ಭಿನ್ನಾಭಿಪ್ರಾಯ ಉಂಟಾದರೆ ಅಪರಾಧ ಖಚಿತವಾ ಸ್ಥಾಪಿತವಾಗಲಿಲ್ಲ ಎಂದು ಅಪರಾಧಿಯನ್ನು ಬಿಡುಗಡೆ ಮಾಡುವುದ ಪದ್ಧತಿ. ಯಾವೊಬ್ಬ ನ್ಯಾಯಾಧೀಶನಿಗಾಗಲಿ ಸಂದೇಹ ಬಂದರೆ ಸಂದೆ ಹದ ಪ್ರಯೋಜನವು ಆಪಾದಿತನಿಗೆ ಒದಗುವುದು. ಎಂದರೆ, ಸಂದೇ ವುಂಟಾದರೆ ಕಡೆಯ ಶಿಕ್ಷೆ ದೇಹಾಂತ ವಿಧಿಸುವುದು ತಪ್ಪು; ಆದ್ದರಿಂದ ಕಾನೂನು ಅವನಿಗೆ ಅನುಕೂಲವಾಗುವುದು; ಪೂರ್ತಿ ಅಪರಾಧ ಅವನ ಮೇಲೆ ಸ್ಥಾಪಿತವಾಗದ್ದರಿಂದ ಅವನನ್ನು ಅಪರಾಧಿಯೆನ್ನಲಾಗದು; ಅವನಿಗೆ ಬಿಡುಗಡೆ ಮಾಡಬೇಕು—ಎಂಬುದು ತತ್ವ.

ದೇಶದ ಸರ್ಕಾರ ಒಂದರ ದೃಷ್ಟಿಯಲ್ಲಿಯೋ, ಅಧಿಕಾರಿಗಳ ದೃಷ್ಟಿಯಲ್ಲಿಮಾತ್ರವೋ ಅಪರಾಧಿ ಎಂದು ಆಪಾದನೆ ಇರುವವರ ವಿಚಾರ ದಲ್ಲಿ ಆ ಅಧಿಕಾರಿಗಳು ಸರ್ವಥಾ ಪ್ರಯತ್ನಪಟ್ಟು ಅದನ್ನು ಸಾಧಿಸುವ ದುಂಟು. ಅವರು ಸಾಮಾನ್ಯವಾಗಿ ಪ್ರಬಲರು. ಅವರಿಗೆ ಸಾಕ್ಷಿ ಪ್ರಮಾಣ ಗಳನ್ನು ಬೇಕಾದಂತೆ ಒದಗಿಸಿಕೊಳ್ಳುವ ಶಕ್ತಿ ಹೆಚ್ಚಾಗಿ ಇರುತ್ತದೆ. ಅಂಥ ಸಂದರ್ಭದಲ್ಲಿ ಒಂದು ಕಡೆ ನ್ಯಾಯಮಂಡಲವೂ ಇನ್ನೊಂದು ಕಡೆ ಸ್ವತಂತ್ರ ಮಹಾಜನವೂ ವೃತ್ತ ಪತ್ರಿಕೆಗಳವರೂ ಇತರ ಸಂಸ್ಥೆಗಳವರೂ

ಅನೇಕ ಬಗೆಯಾಗಿ ಎಚ್ಚರದಿಂದ ಸ್ಥಿತಿಯನ್ನು ವಿಮರ್ಶೆ ಮಾಡುತ್ತಿರುತ್ತಾರೆ. ಕಾಲ ವ್ಯತ್ಯಾಸವಾಗಿ ದೇಶ, ರಾಜ, ಧರ್ಮ ಇವುಗಳ ಪರವಾಗಿ ಜನದ ಅಭಿಪ್ರಾಯ ಬೆಳೆದ ಹಾಗೆಲ್ಲ ಇವಕ್ಕೆ ಸಂಬಂಧಿಸಿದ ಭಕ್ತಿಗಳ ವಿಚಾರದಲ್ಲಿಯೂ ಮನಸ್ಸು ಬದಲಾಗಬಲ್ಲುದು. ಈಚಿನ ಕಾಲದವರ ಅಥವಾ ಧೀರನಾದ ಕಟು ವಿಮರ್ಶಕನ ಮಾತೋ ಬರಹವೋ ನಡತೆಯೋ ಮೇಲ್ಪಟ್ಟ ಅಧಿಕಾರಿಗಳಿಗೆ ಅಸಮಾಧಾನವನ್ನೂ ಆವೇಶವನ್ನೂ ತರಬಲ್ಲದು; ಅವರ ಕೋಪ ಕೆರಳಿ ಅವರು ಶಿಕ್ಷೆ ಒತ್ತುತ್ತಿರಬಹುದು. ಇಂಥ ಸಂದರ್ಭದಲ್ಲಿ ದೇಶದಲ್ಲಿ ಇಲ್ಲಸಲ್ಲದ ಉದ್ರೇಕಗಳು ಹರಡುತ್ತವೆ. ಆದುದರಿಂದಲೇ ಕೊನೆಯ ನ್ಯಾಯಸ್ಥಾನಗಳಲ್ಲಿಯ ನ್ಯಾಯನಿರ್ಣಯವು ಸದಸದ್ವಿವೇಕದಿಂದಲೂ ಸಂಯಮದಿಂದಲೂ ಧರ್ಮವೊಂದರ ದೃಷ್ಟಿಯಿಂದಲೂ ಆಗಬೇಕಾಗಿರುತ್ತದೆ. ಅಲ್ಲಿನ ಅಧಿಕಾರಿಗಳು ಯಾವ ಸ್ವಂತ ನಷ್ಟ, ಕಷ್ಟದ ಭೀತಿಗೂ ಈಡಾಗದೆ ಧರ್ಮವನ್ನು ಎತ್ತಿ ಹಿಡಿಯಬೇಕಾಗುತ್ತದೆ: ಇದಕ್ಕೆ ಅವರಲ್ಲಿ ನಿಸ್ಪೃಹತೆಯೂ ಧೈರ್ಯವೂ ಧರ್ಮಪರಾಯಣತೆಯೂ ಅಗತ್ಯ. ಸ್ವಂತ ತಾವು ಈ ಪಕ್ಷಕ್ಕೊ, ಈ ಧರ್ಮ ಅಥವಾ ವ್ಯವಹಾರ ಮಂಡಲಕ್ಕೊ ಸೇರಿದವರು, ಆದ್ದರಿಂದ ತಮ್ಮ ನಂಬಿಕೆಗೂ ಪೂರ್ವನಿರ್ಣಯಕ್ಕೂ ಅಪ್ರಿಯವಾದ ಅಥವಾ ವಿರೋಧವಾದ ನಡೆ ಇಲ್ಲಿ ಬಂದಿದೆ ಎಂಬ ಕಾರಣದಿಂದ ಅಧರ್ಮವಾಗದಂತೆ ಅವರಲ್ಲಿ ಉದಾತ್ತ ರುಜುವೃತ್ತಿಯೇ ನೆಲಸಿರಬೇಕಾಗುವುದು. ಇದು ಶಕ್ಯವಾಗಬೇಕಾದರೆ ತಮ್ಮ ಪದವಿಗೆ ಹೇಗೆ? ಸಂಬಳಕ್ಕೆ ಹೇಗೆ, ಅಧಿಕಾರಿಗಳು ತಮ್ಮ ಉದ್ಯೋಗಕ್ಕೂ ಉತ್ತರೋತ್ತರ ಉನ್ನತಿಗೂ ಇನ್ನೆಲ್ಲಿ ಚ್ಯುತಿ ತಂದಾರೋ ಎಂಬ ಭಯ ಅವರಿಗೆ ಇರಕೂಡದು. ಆದುದರಿಂದಲೇ ಮುಂದುವರಿದ ಸರಕಾರಗಳಲ್ಲಿ ರಾಜ್ಯದ ಕಾರ್ಯಾಂಗದಿಂದ ಈ ನ್ಯಾಯನಿರ್ಣಯಾಂಗದವರಿಗೆ ಕೇಡು, ಕಿರುಕುಳ ಆಗದಂತೆ ಕಟ್ಟುಪಾಡುಗಳನ್ನು ಮಾಡಿರುತ್ತಾರೆ. ಒಂದು ಸಲ ಉನ್ನತ ನ್ಯಾಯಧೀಶರನ್ನು ಆ ಸ್ಥಾನಕ್ಕೆ ನೇಮಿಸಿತೆಂದರೆ ಅವರು

ದುಷ್ಟರು ದುರ್ಮಾರ್ಗರು ಎಂದು,—ತಿಳಿದುತಿಳಿದು ಧರ್ಮಭ್ರಷ್ಟರಾದರ ಎಂದು ಗೊತ್ತಾಗುವವರೆಗೂ ಅವರನ್ನು ಅಲ್ಲಿಂದ ಕದಲಿಸಲಾಗದಂ ನಿರ್ಬಂಧವಿರುತ್ತದೆ. ಅವರನ್ನು ಕೆಲಸದಿಂದ ತೆಗೆದುಹಾಕುವ ವಿಚಾರದ ನಿಯಮಗಳು ಖಚಿತವಾಗಿರುತ್ತವೆ. ಒಂದು ಸಲ ನಿಯಮಿತರಾದ ನ್ಯಾಯಾಧಿಕಾರಿಗಳ ಮುಖ್ಯಸ್ಥನು ನ್ಯಾಯ ವಿಮರ್ಶೆಯ ಎಲ್ಲ ಅಧಿಕಾ ಗಳನ್ನೂ ಆರಿಸಿಕೊಳ್ಳುವನು. ಅವರ ನಡತೆಯನ್ನು ತನ್ನ ಪರಿಶೀಲನೆ ಒಳಪಡಿಸಿಕೊಳ್ಳುವನು. ನ್ಯಾಯ ನಿರ್ಣಯಶಾಖೆಯ ಎಲ್ಲ ವಿವರ ವ್ಯವಸ್ ಗಳನ್ನೂ ವಿಧಿಸುವನು.— ಆತನ ಸಲಹೆಯ ಮೇಲೆಯೇ ಆ ನೌಕರರಿಗೆ ಎಲ್ಲ ಉನ್ನತಿ.

### ಶುಚಿ

ನ್ಯಾಯಮಂಡಲ ಶುಚಿಯಾಗಿರಬೇಕು. ಅಲ್ಲಿನ ನೌಕರರೂ ಕಾರ್ಯ ವಿಧಾನಗಳೂ ಅಲ್ಲಿನವರ ಲಾಭ ಪ್ರಯೋಜನಗಳ ಕಾರಣದಿಂದ ಕೆಡ ಬಾರದು. ನ್ಯಾಯ ಒಂದಕ್ಕೇ ಅವರ ಪಕ್ಷಪಾತ ಇರಬೇಕು. ಅಸತ್ಯವಾಗಲಿ ಅಧರ್ಮವಾಗಲಿ ಪ್ರವೇಶಿಸಬಾರದು. ಆದುದರಿಂದಲೇ ನ್ಯಾಯಾಧಿಕಾರಿ ಗಳನ್ನು ನಾಡಿನಲ್ಲಿ ಬಹು ಗೌರವಸ್ಥಾನದಲ್ಲಿ ಇರಿಸಿ ಕಾಣುವುದು ; ರಾಜಾಸ್ಥಾನಗಳಲ್ಲಿ ಮುಖ್ಯಮಂತ್ರಿಗೆ ಸಮವಾದ ಪದವಿಯನ್ನು ಕೂಡ ಅವರಿಗೆ ಕೊಡುವುದು. ದೇಶದ ಶಾಸನ ರಚನೆಯುಲ್ಲಿಯೂ ಅವರ ನೇಮ ಕದ ವಿಚಾರದಲ್ಲಿಯೂ ಅವರ ನಿವೃತ್ತಿಯ ವಿಚಾರದಲ್ಲಿಯೂ ಸರ್ಕಾರದ ವರು ಸಾಮಾನ್ಯವಾಗಿ ಪ್ರವೇಶಿಸಕೂಡದು ಎಂಬ ವಿಧಿ ಇರುತ್ತದೆ. ಸರ್ಕಾ ರದ ಪ್ರಯೋಜನಕ್ಕಾಗಿ ಯಾವ ವ್ಯವಹಾರವೂ ಅನ್ಯಾಯವಾಗದಂತೆಯೂ, ಅವರ ಭಯದಿಂದಲಾಗಲಿ ಅವರಿಕ್ಕುವ ಮೋಹ ಆಶೆಗಳಿಂದ ಆಗಲಿ ನ್ಯಾಯ ವಿಚಕ್ಷಣೆ ಕೆಡದಂತೆಯೂ ಅವರ ಮುಖ್ಯಸ್ಥರಿಗೆ ಸರ್ಕಾರದ ಅಧಿಕಾರಿಗಳಿಗೆ ಮೇಲ್ಪಟ್ಟ ಪದವಿಯನ್ನು ಕೊಟ್ಟಿರುತ್ತಾರೆ. ಸರ್ಕಾರ ಮಾಡಿದ್ದು ಕೂಡ ಅನ್ಯಾಯ, ತಪ್ಪು ಎಂದು ಟೀಕಿಸಿ ನಿರ್ಭಯವಾಗಿ

ಅವರು ತೀರ್ಮಾನ ಮಾಡಬೇಕಾಗುತ್ತದೆ. ಇಂತಹ ಗೌರವ ಅವರಿಗಿರಬೇಕಾದ್ದು ಅತ್ಯಾವಶ್ಯಕ.

### ನಿರ್ಣಯವಿಧಾನ — ಜೂರಿ

ಇನ್ನೂ ನ್ಯಾಯ ನಿರ್ಣಯವಾಗಬೇಕಾಗಿರುವ ಕಾಲದಲ್ಲಿ ಅಲ್ಲಿನ ವಿಧಾನಗಳನ್ನು ಕುರಿತು ಯಾವ ಅಲ್ಲಸಲ್ಲದ ಆಕ್ಷೇಪಣೆಗಳನ್ನೂ ಇತರರು ಮಾಡಬಾರದು. ನ್ಯಾಯಸ್ಥಾನದ ಗೌರವಕ್ಕೆ ಹಾನಿ ತರಬಲ್ಲ ಟೀಕೆಯನ್ನೂ ವ್ಯಾಖ್ಯಾನವನ್ನೂ ಮಾಡಿ, ನ್ಯಾಯಸ್ಥಾನದ ಗೌರವ ಕಡಮೆಯಾಗದಂತೆ ನೋಡಿಕೊಳ್ಳಬೇಕು. ನ್ಯಾಯಸ್ಥಾನಕ್ಕೆ ಬಂದವರೆಲ್ಲ ಸರಿಯಾಗಿ ನಡೆಯಬೇಕು. ಮರ್ಯಾದೆ ಮೀರಿ ಮಾತನಾಡಕೂಡದು. ಸಭೆಯ ಗೌರವಕ್ಕೂ ಹಿರಿಮೆಗೂ ನ್ಯಾಯಾಧೀಶರ ಅಪ್ಪಣೆಗೂ ಬಾಗಬೇಕು. ಮೀರಿ ನಡೆದವರು ಶಿಕ್ಷೆಗೆ ಗುರಿಯಾಗುತ್ತಾರೆ. ಕೆಲವು ಸಂಬಂಧಗಳಲ್ಲಿ ನ್ಯಾಯಾಧೀಶರ ಜೊತೆಗೆ ಸಾಮಾನ್ಯರ ಮಂಡಲಿಯೊಂದು ನ್ಯಾಯನಿರ್ಣಯ ಕಾರ್ಯದಲ್ಲಿ ನೆರವಾಗುತ್ತದೆ. ಇದಕ್ಕೆ 'ಜೂರಿ' ಎಂದು ಹೆಸರು. ಗೌರವಸ್ಥರೂ, ಲೋಕಪರಿಜ್ಞಾನವುಳ್ಳವರೂ ಆದ ನಾಲ್ವರನ್ನು ಕರಸಿ ಕ್ರಿಮಿನಲ್ ವ್ಯವಹಾರದಲ್ಲಿ ಎಲ್ಲವನ್ನೂ ಅವರೆದುರಿಗೆ ನಡಸುವರು. ಎರಡೂ ಕಡೆಯ ವಾದಗಳನ್ನು ಕೇಳಿದ ಮೇಲೆ ಅವರು ತೀರ್ಮಾನ ಕೊಡುವರು. ತಮ್ಮ ಮುಖಂಡರ ಮೂಲಕ ಅವರು ತಿಳಿಸಿದ ನಿರ್ಣಯಕ್ಕೆ ಬೆಲೆ ಬರುವುದು. ದಾಂಪತ್ಯವಿಚ್ಛೇದ, ಮಾನನಷ್ಟ, ನರಹತ್ಯ, ದ್ರೋಹ ಮುಂತಾದ ಸಂಬಂಧಗಳಲ್ಲಿ ಜೂರಿಯ ತೀರ್ಮಾನ ಹತ್ತು ಜನ ಸಾಮಾನ್ಯರ ತೀರ್ಮಾನದಂತೆ ಮಾಡಿದರೆ ಸರಿಯಾಗುವುದು ಎಂಬರ್ಥ ಈ ಮೂಲಕ ಸಿದ್ಧವಾಗುವುದು. ವ್ಯವಹಾರದ ವಿಷಯವನ್ನೂ, ಸಂಗತಿಗಳನ್ನೂ ಕುರಿತ ತೀರ್ಮಾನ ಇವರದಾಗುವುದು. ಕಾನೂನಿನ ದೃಷ್ಟಿಯಲ್ಲಿ ಏಳುವ ಅಂಶಗಳನ್ನೂ ಕಡೆಯ ನಿರ್ಣಯವನ್ನೂ ಹೇಳುವ ಭಾಗ ನ್ಯಾಯಾಧೀಶರದು. ಜೂರಿಯವರಿಗೂ ನ್ಯಾಯಾಧೀಶರಿಗೂ

ಅವರಿಬ್ಬರ ನಿರ್ಣಯಗಳಿಗೂ ಇಂಥದೇ ಸಂಬಂಧ, ಇಂಥದೇ ಸ್ಥಾ
ಇಂಥದೇ ಮಾನ ಎಂದು ಖಚಿತವಾಗಿ ಗೊತ್ತಾಗಿರುವುದು.

ಸಾಧ್ಯವಾದ ಮಟ್ಟಿಗೂ ಎಲ್ಲ ವಿಚಾರಣೆಗಳೂ ಸಾರ್ವಜನಿಕ ಎಂ
ಎಲ್ಲರಿಗೂ ತಿಳಿಯುವಂತೆ ಪ್ರಕಟವಾಗಿ ನಡೆಯುತ್ತವೆ. ನಾಯಸ್ಥಾನದ
ಸ್ಥಳವಿದ್ದರೆ ಸರಿಯಾಗಿ ನಡೆದುಕೊಳ್ಳುವ ಯಾರಾದರೂ ಅಲ್ಲಿದ್ದು ಎ
ವನ್ನೂ ನೋಡುತ್ತಿರಬಹುದು. ವಿಚಾರಣೆ ಹೀಗೆ ಬಹಿರಂಗವಾಗಿ ನಡೆಯ
ವುದು ಪ್ರಜೆಗಳ ನಂಬಿಕೆಗೆ ತೃಪ್ತಿ ತರುತ್ತದೆ. ವಿಶೇಷ ಸಮಯಗಳ
ವೃತ್ತಪತ್ರಿಕೆಗಳವರು ಅಲ್ಲಿ ನಡೆವುದನ್ನು ಜನಕ್ಕೆ ವರದಿಮಾಡುತ್ತಿರ
ತ್ತಾರೆ. ವಿಶೇಷವಾದ ಅಲ್ಲಿನ ತೀರ್ಮಾನಗಳನ್ನು ‘ಲಾ’ ಪತ್ರಿಕೆಗ
ವರು ಪ್ರಕಟಿಸುತ್ತಾರೆ. ಬೇರೆ ನಾಲ್ಕು ಪ್ರಾಂತಗಳ ನ್ಯಾಯಾಧೀಶರ
ಯಾವುದಾದರೊಂದು ಬಗೆಯ ವ್ಯವಹಾರದಲ್ಲಿ ಹೇಗೆ ತೀರ್ಮಾನಮಾಡಿದಾ
ರೆಂಬುದೂ ಗಣನೆಗೆ ಬರುತ್ತದೆ. ನಿರ್ಣಯಕ್ಕೆ ಈ ಎಲ್ಲವೂ ಸಹಾಯವೇ

### ಕಡೆಯ ತೀರ್ಪು—ಎಕ್ವಿಟಿ

ಸಾಮಾನ್ಯವಾಗಿ ‘ಅಪ್ಪೀಲ್’ ಎಂಬ ಕಡೆಯ ನಿರ್ಣಯಮಾಡುವ
ಮತ್ತು ಮೇಲ್ವಿಮರ್ಶೆ ಮಾಡುವ ನ್ಯಾಯಮಂದಿರಗಳು ಆಯಾದೇಶದ
ಹೈಕೋರ್ಟುಗಳು.* ಕೆಳಗಿನ ನ್ಯಾಯಸ್ಥಾನದಲ್ಲಿ ನಡೆದುದನ್ನೆಲ್ಲ ಮೇಲಿನ
ಈ ನ್ಯಾಯಾಧೀಶರ ಮುಖಂಡರು ಪುನಃ ವಿಮರ್ಶೆ ಮಾಡಬಲ್ಲರು. ಅವನ್ನು
ಪುನಃ ಪರಿಶೀಲನೆಗೆ ನೇರವಾಗಿ ತಾವೇ ತೆಗೆದುಕೊಳ್ಳುವ ಸರ್ವಾಧಿಕಾರ
ಅವರಿಗೆ ಉಂಟು. ಹೀಗಿರುವುದರಿಂದ, ಯಾವುದಾದರೊಂದು ವ್ಯವಹಾರ
ದಲ್ಲಿ ಕೆಳಗಿನವರ ನಿರ್ಣಯ ಅನ್ಯಾಯವಾಗಿ ಕೆಟ್ಟಿದ್ದರೆ ಅದನ್ನು ಪುನಃ
ವಿಮರ್ಶೆಮಾಡಿ ಗಮನಕ್ಕೆ ತಂದುಕೊಳ್ಳಲು ಶಕ್ಯವಾಗುತ್ತದೆ. ಒಂದುಸಲ
ಎಲ್ಲಕ್ಕೂ ಮೇಲಿನ ನ್ಯಾಯಸ್ಥಾನದಲ್ಲಿ ತೀರ್ಮಾನವಾದುದನ್ನು ಪುನಃ

* ದೇಶದ ಅತ್ಯುನ್ನತ ನ್ಯಾಯಸ್ಥಾನದಲ್ಲಿಯೇ ಮೊದಲ ವ್ಯವಹಾರವನ್ನು ಹೂಡುವ
ಅವಕಾಶ ಅಪರೂಪವಾಗಿ ಇರುವುದುಂಟು.

ಪುನಃ ಎತ್ತಿ ಪರಿಶೀಲಿಸಿ ಬೇರೆ ವಿವೇಚನೆಮಾಡಿ ಅನಿಶ್ಚಯ ಉಂಟಾಗದಂತೆ* ಹಿಂದಿನ ನಿರ್ಣಯವನ್ನು ಒಂದು ಸಂಪ್ರದಾಯದಂತೆ ಅನುಸರಿಸುವರು. ಮುಂದೆ ಇತರ ಅಂಥ ವ್ಯವಹಾರಗಳಲ್ಲಿ ಆ ನಿರ್ಣಯದಂತೆಯೇ ತೀರ್ಮಾನ ಮಾಡುವರು. ಈ ನಡತೆ ಒಂದು ಸಮಯವಾಗುವುದು. ಕೆಲವು ಸಲ ಒಂದು ನ್ಯಾಯ ಶಾಸನದ ಮೂಲಸ್ವರೂಪವನ್ನೇ ಆ ವರೆಗೆ ಇಲ್ಲದಿದ್ದ ಇನ್ನೊಂದು ವಿಶಾಲಾರ್ಥದಲ್ಲಿ ಪ್ರಯೋಗವಾಗುವಂತೆ ಅರ್ಥ-ವಿವರಣೆ ಮಾಡಬೇಕಾಗುತ್ತದೆ. ಕಾನೂನು ಮಾಡಿದವರ ಮನಸ್ಸಿನಲ್ಲಿ ಏನಿತ್ತು, ಕಾನೂನಿನ ಅಗತ್ಯವೇನಿತ್ತು, ಈ ಹೊಸ ಸಂಬಂಧದಲ್ಲಿಯೂ ಸಮಾಜದಲ್ಲಿಯೂ ಯಾವ ಪರಿಸ್ಥಿತಿ ಪ್ರಬಲಿಸಿದೆ, ಕಾನೂನಿಂದ ಹೇಗೆ ಒಂದು ಅನ್ಯಾಯವಾಗಬಹುದು, ಹೊಸ ಅಗತ್ಯಕ್ಕೆ ತಕ್ಕಂತೆ ಇಂಥ ಸಂದರ್ಭಗಳಲ್ಲಿ ನ್ಯಾಯವನ್ನು ಉದಾರವಾದ ಒಂದು ರೀತಿಯಲ್ಲಿ ಹೇಗೆ ಅರ್ಥಮಾಡಬೇಕಾಗಿದೆ ಎಂಬುದನ್ನು ತಿಳಿಸಿ ಇರುವ ಕಾನೂನಿಗೆ ಅದರ ಸ್ವರೂಪವನ್ನೇ ಮಾರ್ಪಡಿಸುವಂತಹ ಅರ್ಥಶಕ್ತಿ ಕೊಡುತ್ತಾರೆ. ಇದು ಬಹು ಎಚ್ಚರಿಕೆಯಿಂದ ಆಗಬೇಕಾಗುತ್ತದೆ. ದೇಶದ ಶ್ರೇಷ್ಠ ನ್ಯಾಯಾಧೀಶರು ಮಾತ್ರ ಅಪರೂಪವಾಗಿ ಮಾಡಬಹುದಾದುದು ಇದು. ವ್ಯತ್ಯಾಸ ಬಹು ದೊಡ್ಡದಾದರೆ ಹಿಂದಿನ ಕಾನೂನನ್ನು ಬದಿಗಿಟ್ಟು ಅಥವಾ ರದ್ದುಮಾಡಿ ಹೊಸ ಇನ್ನೊಂದು ಕಾನೂನು ಮಾಡಬಹುದು. ಇರುವ ಕಾನೂನನ್ನು ಸುಧಾರಿಸಿಕೊಳ್ಳಬಹುದು. ಅಷ್ಟುದೂರ ಹೋಗಲು ಅಗತ್ಯಬೀಳದಾಗ, ಆದರೆ ಹಿಂದಿನ ರೀತಿಯಲ್ಲಿ ತೀರ್ಮಾನಮಾಡಿದರೆ ದುರ್ಭರ ಕಷ್ಟನಷ್ಟ ಆದೀತೆಂದು ಗೊತ್ತಾದಾಗ, ಕಾನೂನಿನ ಒಂದು ಹೊಸ ಧಾತುವನ್ನು, ಒಂದು ಹೊಸ ಧರ್ಮಶಕ್ತಿಯನ್ನು ಉಂಟುಮಾಡಿಕೊಡಲು "ಎಕ್ವಿಟಿ" (Equity) ಎಂಬ ತತ್ವವನ್ನು ಅನುಸರಿಸುವರು. ಬಳಕೆಯಲ್ಲಿರುವ ಕಾನೂನಿಗೆ ಇದು ಸೇರಿ ವ್ಯವಹಾರ ಜೀವನದ ಮುನ್ನಡೆಗೆ ದಾರಿ ತೋರಿಸುವುದು.

* ವಿಶೇಷ ಸಂದರ್ಭಗಳಲ್ಲಿ ಹೊರತು

ಕಾನೂನಿನ ಮೂರ್ತಿತ್ವವು ಈ ಮೂಲಕ ಬೆಳೆಯುವುದು. ಅದಕ್ಕೆ ಹ
ರಸಾಂಶವೂ ಕಳೆಯೂ ಬರುವುವು. ಸಾಮಾನ್ಯವಾಗಿ ಇವರ ತೀರ್ಮಾನ
ಮೇಲೆ ಯಾರಿಗೂ ಮೊರೆಯಿಲ್ಲ. ಮರಣದಂಡನೆಯಂತಹ ಉಗ್ರ ಸಂದರ
ಗಳಲ್ಲಿ ಮಾತ್ರ ರಾಜನಿಗೆ ಮೊರೆಯಿಟ್ಟು ಆತನ ಕೃಪೆ ಬೇಡುವ ಅವಕ
ಇರುತ್ತದೆ. ಕಾನೂನು, ನ್ಯಾಯ, ಧರ್ಮ, ಕೃಪೆ—ಸುಮಾರು ಈ ಹ
ಗಳಲ್ಲಿದೆ ಈ ಪ್ರಪಂಚದ ನೆಲಸು.

## ನ್ಯಾಯವಾದಿಗಳು

ನ್ಯಾಯಸ್ಥಾನಗಳಲ್ಲಿ ಸಹಾಯಕರಾಗಿ ನ್ಯಾಯವಾದಿಗಳೆಂಬ ಖಾಸ
ವಿದ್ವಾಂಸರಿರುತ್ತಾರೆ. ಈ ನ್ಯಾಯವಾದಿಗಳು ಒಂದೊಂದು ಕಡೆ ವಹಿ
ವಾದಮಾಡುತ್ತಾರೆ. ತಾವು ಹೇಳುವುದು ಸರಿ, ಕಾನೂನಿಗ
ನ್ಯಾಯಕ್ಕೂ ಸಮ್ಮತ ಎಂದು ಸ್ಥಾಪಿಸಲು ಯತ್ನಿಸುತ್ತಾರೆ. ಇರು
ಕಾನೂನಿಗೆ ತಮ್ಮ ಪರವಾಗಿಯೇ ಅರ್ಥ ಎನ್ನುತ್ತಾರೆ. ಹಿಂ
ತಮ್ಮಂತೆಯೇ ಅರ್ಥಮಾಡಿದೆ ಎಂದು ತೋರಿಸುತ್ತಾರೆ. ತಮ್ಮ ಪಕ್ಷಕ
ಕಾನೂನಿನ ಯಾವುದಾದರೂ ಒಂದು ಭಾಗದಿಂದ ಕಷ್ಟವೆಂದು ತೋರಿದ
ಆ ಭಾಗಕ್ಕೆ ಸದ್ಯದ ವ್ಯವಹಾರ ಹೊಂದುವುದಿಲ್ಲ, ಅಥವಾ ಬೇರೆ ಅರ್ಥ
ಮಾಡಬೇಕು ಎಂದೋ, ಇಲ್ಲಿನ ಪ್ರಮಾಣ ವಿರುದ್ಧವಾಗಿದೆ ಎಂದೋ
ವಾದಿಸುತ್ತಾರೆ. ನ್ಯಾಯಮಂಡಲಗಳು ಒಪ್ಪುವಂತಹ ರುಜುವಾತು, ಸಾಕ್ಷಿ
ಇಲ್ಲ; ಪ್ರತಿವಾದಿಗಳ ಮಾತು, ಪ್ರಮಾಣ, ವಾದ ಸಾಕಷ್ಟಿಲ್ಲ, ಅಸಂಗತ
ವಾಗಿವೆ, ನ್ಯಾಯದ ಯಾವುದೋ ಕ್ರಮದಲ್ಲಿ ಲೋಪ ಉಂಟಾಗಿದೆ,
ಇಂಥ ನ್ಯಾಯಸ್ಥಾನಕ್ಕೆ ತಮ್ಮ ವ್ಯವಹಾರವನ್ನು ನಡಸಲು ಅಧಿಕಾರ
ವಿಲ್ಲ, ಅಥವಾ, ಇಲ್ಲಿ ಪಕ್ಷಪಾತ ಆದೀತು—ಎಂಬಂತೆ ಆಕ್ಷೇಪಣೆ ಎತ್ತಿ
ನ್ಯಾಯವಾದಿಗಳು ತಮ್ಮ ಪಕ್ಷವನ್ನು ಸಾಧಿಸಲು ಯತ್ನಿಸುತ್ತಾರೆ. ತಮ್ಮ
ಕಡೆಯ ವಾದವನ್ನು ಮಂಡಿಸುವುದಕ್ಕಿಂತ ಮುಂಚೆ ಎದುರುಕಡೆಯ ವಾದ
ದಲ್ಲಿ ಹುಳುಕಿದೆ, ಹುರುಳಿಲ್ಲ ಎಂದು ಸ್ಥಾಪಿಸಲು ತೊಡಗುವರು. ನ್ಯಾಯ

ಕ್ಕಿಂತ ವಾದಭಾಗ ಇಲ್ಲಿ ಹೆಚ್ಚಾಗುವುದುಂಟು. ಎರಡು ಕಡೆಯವರ ವಾದದಲ್ಲಿಯೂ ಹಾಗೆಯೇ. ಇವರಿಬ್ಬರ ವಾದ ಪ್ರಮಾಣಗಳ ಆಧಾರದ ಮೇಲೆ ಸತ್ಯ ಸ್ಥಿತಿ ಹೇಗಿರಬಹುದು ಎಂಬುದನ್ನು ಊಹಿಸಿ ನಿರ್ಣಯಿಸುವುದು ನ್ಯಾಯಾಧೀಶನಿಗೆ ಸೇರಿದ್ದು. ಆತನ ಊಹೆ ತನ್ನ ಎದುರಿಗಿರುವ ಸಾಕ್ಷಿ ಪ್ರಮಾಣಗಳ ಮೇಲೆ ಕಡ್ಡಾಯವಾಗಿ ನಿಲ್ಲಬೇಕಾದ್ದು. ನಿಜವಾದ ಸಂಗತಿ ಬೇರೆಯೆಂಬ ಅನುಮಾನ ಸ್ಪಷ್ಟವಾಗಿ ಸ್ಫುರಿಸುತ್ತಿದ್ದರೂ ಆ ನಿರ್ಣಯಕ್ಕೆ ಸಾಕಾದಷ್ಟು ಕೋರ್ಟು ಒಪ್ಪುವ ರುಜುವಾತು ಹೊರಡದಿರುವುದರಿಂದ ಆತನ ತೀರ್ಮಾನ ಕಾನೂನಿಗೆ ತಕ್ಕಂತೆ ಆದೀತೇ ಹೊರತು ಸತ್ಯಕ್ಕೆ ಹತ್ತಿರವಾಗದೆ ಹೋಗಬಹುದು. ನ್ಯಾಯಸ್ಥಾನದಲ್ಲಿ ವಾದ ಪ್ರತಿವಾದಗಳ ಸಂಬಂಧದಲ್ಲಿ ನಡೆಯುವುದು ಬಹುವೇಳೆ ವಾದ ಕುಶಲತೆಗೆ ಜಯ. ಇದು ನ್ಯಾಯವಾದಿಯ ಶಕ್ತಿಗೆ ಒಳಪಡುತ್ತದೆ. ಹಲವೇಳೆ ಹೆಚ್ಚು ಹಣವುಳ್ಳವರು ಹೆಚ್ಚು ಶಕ್ತರಾದ ವಕೀಲರನ್ನಿಟ್ಟು ಗೆಲವನ್ನು ಸಂಪಾದಿಸಬಹುದು. ಕಕ್ಷಿಗಳ ಪರ ನಡೆಯುವ ಈ ವಾದಗಳಲ್ಲಿ ಎರಡೂ ಕಡೆಯ ಎಲ್ಲ ಅಂಶಗಳೂ ಹೊರಗೆ ಬರುವುದಿಲ್ಲ. ಇವರಿಗೆ ಬೇಡದುದನ್ನು ಈ ಕಡೆಯವರೂ, ಅವರಿಗೆ ಬೇಡದುದನ್ನು ಅವರೂ ಮರೆಮಾಜುತ್ತಾರೆ. ಮರೆಮಾಜಿರಬಹುದಾದುದನ್ನು ಹೊರಡಿಸುವ ಅಗತ್ಯ ಬಿದ್ದಾಗ ಕುಶಲರಾದ ನ್ಯಾಯವಾದಿಗಳು ಅವಕ್ಕೆ ಸಂಬಂಧಿಸಿದ ಎಲ್ಲ ಪ್ರಮಾಣಗಳನ್ನು ಹೊರಕ್ಕೆ ತರಲು ಯತ್ನಿಸುತ್ತಾರೆ. ನ್ಯಾಯಾಧೀಶರು ಇದಕ್ಕೆ ನೆರವಾಗುತ್ತಾರೆ. ಆದರೂ ಇಲ್ಲಿನ ಇವರ ವಾದಗಳೆಲ್ಲ ಪಕ್ಷಸತ್ಯಗಳು. ನ್ಯಾಯಾಧೀಶನು ಇವನ್ನೆಲ್ಲ ಮನಸ್ಸಿಗೆ ತಂದುಕೊಂಡು ಸಮಾಧಾನ ಚಿತ್ತದಿಂದ ಸತ್ಯ ನಿರ್ಣಯವನ್ನೂ ಅದಕ್ಕೆ ತಕ್ಕಂತೆ ನ್ಯಾಯ ನಿರ್ಣಯವನ್ನೂ ಮಾಡಬೇಕಾಗುವುದು.

ನ್ಯಾಯಸ್ಥಾನಗಳಲ್ಲಿ ನ್ಯಾಯ ಸಿಕ್ಕುವುದಕ್ಕಿಂತ ಕಾನೂನು ಸಿಕ್ಕುವುದು ಎಂಬ ಒಂದು ಮಾತು ಇದೆ. ಇದೆಷ್ಟೇ ಆಕ್ಷೇಪಕರವಾಗಿ ಕಾಣಿಸಲಿ

ಇದನ್ನು ಮೀರಿ ನಡೆಯುವುದು ಶಕ್ಯವಿಲ್ಲ. ವಿಚಾರಣೆ ಎಂಬುದನ್ನು ಒ
ದರೆ, ಅದಕ್ಕೆ ಪ್ರಮಾಣಗಳು ಅಗತ್ಯವೆಂದು ಒಪ್ಪಿದರೆ, ಸತ್ಯದ ಪರ ವಾ
ವನ್ನು ಸ್ಥಾಪಿಸುವುದು ಅಗತ್ಯವೆಂದು ಒಪ್ಪಿದರೆ ಬೇರೆ ಗತಿಯಿಲ್ಲ. ಹಿಂದಿ
ಕಾಲದಲ್ಲಿ ದಿವ್ಯ, ಬೆಂಕಿಯ ಪ್ರಮಾಣ, ದೇವರ ಸತ್ಯ, ಮಕ್ಕಳು ಮ
ಮೇಲೆ ಇಟ್ಟ ಆಣೆ, ಕಾಳಗದ ಪ್ರಮಾಣ ಮುಂತಾಗಿ ಪ್ರಮಾಣ ಒದಗಿ
ತ್ತಿದ್ದರು. ಸತ್ಯವನ್ನು ದೇವರು ಸ್ಥಾಪಿಸುವನು ಎಂದು ನಂಬಿದ್ದರು. ಜನಕ
ಸ್ವರ್ಗದಲ್ಲಿ ನಂಬಿಕೆ, ನರಕದ ಭಯ, ಪಾಪದ ಅಂಜಿಕೆ, ಹಲವು ಜನ್ಮ ಎ
ಬೇಕಾದ ಭಯ, ಮಕ್ಕಳಿಗೆ ಮುಂದೆ ಕೇಡುಂಟಾಗುವುದೆಂಬ ಶಂ
ಇದ್ದಾಗ ಇವಕ್ಕೆಲ್ಲ ಬೆಲೆ ಇತ್ತು. ಇಂದು ಆ ನಂಬಿಕೆಗಳು ಸಡಿಲವಾಗಿ
ಅವುಗಳಿಂದ ಸತ್ಯಸ್ಥಾಪನೆ ಆಗದಿರಬಹುದು. ಬಲಿಷ್ಠರೂ, ದುರ್ಮಾ
ರ್ಗರೂ, ಯಾವುದಕ್ಕೂ ಹೇಸದವರೂ ಏನನ್ನು ಬೇಕಾದರೂ ಮಾಡುವರು
ಆ ಯಾವುದರಿಂದಲೂ ಸತ್ಯಸಾಕ್ಷಿ ದೊರೆಯದೆ ಹೋಗಬಹುದು. ಕಾನೂ
ನೊಡನೆ ಸತ್ಯವನ್ನೂ ನ್ಯಾಯವನ್ನೂ ಸಾಧಿಸಿ, ಸತ್ಯವೂ ಧರ್ಮವೂ
ನೆಲಸುವಂತೆ ಮಾಡುವುದು ಆಸ್ಥಿತಿಯಲ್ಲಿ ಕಷ್ಟ ಕೆಲಸ. ನ್ಯಾಯಾಧೀಶರ
ಕೈಗೆ ಮೀರಿದ ಕೆಲಸ.

## ವಕೀಲರ ಸ್ಥಾನ

ನ್ಯಾಯವಾದಿಗಳು ಕಾನೂನನ್ನು ಅನ್ವಯಿಸುವ ಕೆಲಸದಲ್ಲಿ ತೊಡ
ಗಿರುವವರು. ಈ ಕೆಲಸದಿಂದಲೇ ಅವರಿಗೆ ಜೀವನ. ತಮ್ಮ ಕಕ್ಷಿಗಾರರಿಗೆ
ಜಯವಾಗುವಂತೆ ವಾದಿಸಿ ಅವರ ವ್ಯವಹಾರವನ್ನು ಗೆದ್ದುಕೊಡುವುದು
ಅವರ ವೃತ್ತಿ. ಸ್ವಂತವಾಗಿ ಅವರಿಗೆ ಯಾವ ಬೇರೆ ಉದ್ದೇಶವೂ
ಆಶೆಯೂ ಇರುವುದಿಲ್ಲ. ಇವೊತ್ತು ಕಾನೂನಿನ ಈ ಪಕ್ಷ ವಾದಿಸಿದರೆ
ನಾಳೆ ಬೇರೆ ಇಂತಹ ಒಂದು ವ್ಯವಹಾರದವರು ಇದಕ್ಕೆ ವಿರುದ್ಧವಾದ
ಪಕ್ಷ ವಹಿಸಿ ವಾದಿಸಿರೆಂದರೆ ವಹಿಸಿ ವಾದಿಸುವರು. ವಿಧವಿಧವಾದ
ಪ್ರಮಾಣಗಳನ್ನು ಒದಗಿಸಿಕೊಂಡು ತಮ್ಮ ಕಕ್ಷಿ ಕುಳಗಳನ್ನು ಗೆಲ್ಲಿಸಲು

ತೊಡಗುವರು. ಯಾವುದೇ ಸಮಯದಲ್ಲಾಗಲಿ ಇಂಥವರು ನ್ಯಾಯದ ಸಮಗ್ರವ್ಯಾಪ್ತಿಯನ್ನು ಕುರಿತು ಅಥವಾ ಸ್ವರೂಪವನ್ನು ಕುರಿತು ಯೋಚನೆಮಾಡಬೇಕಾಗಿರುವುದಿಲ್ಲ ; ಸಂಪೂರ್ಣವಾಗಿ ನ್ಯಾಯಕ್ಕೂ ಸತ್ಯಸ್ಥಾಪನೆಗೂ ಶ್ರಮಿಸಬೇಕಾಗಿರುವುದಿಲ್ಲ. ಕಾನೂನಿನ ವಿವರಣೆ, ಅನ್ವಯ, ಅರ್ಥಕಲ್ಪನೆ, ಒಂದಂಶದಲ್ಲಿ ಅದರ ವಿಮರ್ಶೆ, ಪಕ್ಷಸಾಧನೆ, ವಾದದಲ್ಲಿ ಜಯ—ಇದು ಅವರ ಕೆಲಸ. ನ್ಯಾಯಸ್ಥಾನಗಳು ಅವರಿಗೆ ಕಾನೂನಿನ ಪೇಟೆ. ಅಲ್ಲಿನ ಕಕ್ಷಿಗಳು ಗಿರಾಕಿಗಳು. ಅವರು ತಮ್ಮ ಗಿರಾಕಿಗಳಿಗೆ ಲಾಭ ಬರುವಂತೆ ಸಹಾಯಕರಾದ ವರ್ತಕರೂ ದಲ್ಲಾಳಿಗಳೂ ಆದರೆ ಸಾಮಾನ್ಯವಾಗಿ ಸಾಕು. ಧರ್ಮಕ್ಕೆ ಸಹಾಯವಾಗುವಂತೆ ವಾದಮಾಡಬೇಕು, ಅಧರ್ಮಿಗಳ ಪರ ವಾದಿಸಿ ಅವರ ಏಳಿಗೆಗೂ ವಿಜೃಂಭಣಕ್ಕೂ ನೆರವಾಗಬಾರದು, ಸಜ್ಜನರನ್ನೂ ಅವರ ಬದುಕನ್ನೂ ಉಳಿಸಬೇಕು ಎಂಬುದೇನೊ ಗುರಿ. ಅದನ್ನು ಸಾಧಿಸುವುದಕ್ಕಾಗಿಯೇ ಅವರೂ ನ್ಯಾಯಸ್ಥಾನಗಳೂ ಇರುವುದು—ಎಂಬುದೂ ಅವರಿಗೆ ಗೊತ್ತು. ಅದಕ್ಕಾಗಿ ಅವರು ಪ್ರಮಾಣ ತೆಗೆದುಕೊಳ್ಳುವರು. ಆದರೆ ವಸ್ತುಪ್ರಪಂಚದಲ್ಲಿ ವ್ಯವಹಾರ, ವೃತ್ತಿ ಪ್ರಯೋಜನ ಬುದ್ಧಿ ಇವು ಬೇರೆಗೆ ನಡಸುವುವು.* ಒಂದು ಮಾತಿನಲ್ಲಿ ಹೇಳುವುದಾದರೆ ಕಾನೂನಿರುವುದೇ ಮನುಷ್ಯರು ಸರಿಯಾಗಿ ನಡೆದುಕೊಳ್ಳರು ಎಂಬ ಕಾರಣದಿಂದ. ಅನ್ಯಾಯವರ್ತನೆಯಿಂದ ಜನರನ್ನು ರಕ್ಷಿಸಬೇಕು ; ಆದುದರಿಂದ ಅಲ್ಲವೇ ಕಾನೂನು, ನಿರ್ಬಂಧ, ಶಿಕ್ಷೆ ಮುಂತಾದ್ದರ ಏರ್ಪಾಡು ? ಜನ ಸರಿಯಾಗಿ ನಡೆಯುವಂತಿದ್ದರೆ ಯಾವ ಕಾನೂನೂ ಬೇಕಿರಲಿಲ್ಲ. ಮನುಷ್ಯರ ಅಯೋಗ್ಯತೆಯೇ ಎಲ್ಲ ಕಾನೂನಿಗೆ ಅಗತ್ಯ. ಸತ್ಯನಿಷ್ಠರೂ, ನ್ಯಾಯನಿಷ್ಠರೂ ಆದ ನ್ಯಾಯವಾದಿಗಳಿಗೆ ತಮ್ಮ ಮನಸ್ಸಿಗೆ ಸರಿಯೆಂದು ತೋರಿದ ವ್ಯವಹಾರಗಳನ್ನು ತಿರಿಚಿ

---

* ಯಾವ ವೃತ್ತಿಯಲ್ಲಿಯೂ ಹೀಗೆಯೇ ಸರಿ ; ಎಲ್ಲಿಯೇ ಆಗಲಿ ಮನುಷ್ಯನ ಮನಸ್ಸಿಗೂ ಪ್ರಯೋಜನಕ್ಕೂ ಪೂರ್ತಿ ಬಿಗಿ ಕಟ್ಟುಹಾಕಿ ನಿರ್ಬಂಧಿಸುವುದು ಯಾರ ಕೈಯಿಂದಾದೀತು ?

ಮುರಿದು ನಡೆಯಲು ಇಷ್ಟವಿಲ್ಲದೆ ಇರಬಹುದು. ಅಂತಹ ವಾದಗಳ
ಅವರು ಹಿಡಿಯದೆ ಹೋಗಬಹುದು. ಹಿಡಿದರೆ ಕಾನೂನಿನ ದೃಷ
ತಪ್ಪಲ್ಲ. ತಮ್ಮ ಅರ್ಥವನ್ನು ಯುಕ್ತಿಯಿಂದ ಸಾಧಿಸಬಲ್ಲರಾದರೆ ಸಾ
ಸಾಮಾನ್ಯ ವ್ಯವಹಾರದಲ್ಲಿ ಹೇಗೆಯೋ ರಾಜಕೀಯ ವಾದಗಳಲ್ಲಿಯ
ಹಾಗೆಯೇ; ರಾಜ್ಯಾಂಗ ಶಾಸನವನ್ನೂ ಸರ್ಕಾರದ ಅಂಗಗಳಿಗಿರ
ಸಂಬಂಧವನ್ನೂ ವಿಮರ್ಶೆಮಾಡಬೇಕಾದಾಗಲೂ ಹೀಗೆಯೇ—ವ
ಒಂದು ಕಡೆಗೆ ಅನ್ವಯಿಸುವಂತೆ ಇರುತ್ತದೆ.

ಆದರೆ ಈ ಎಲ್ಲ ಸಂದರ್ಭದಲ್ಲಿಯೂ ನ್ಯಾಯಾಧೀಶರು ಮಾತ್ರ ಎರ
ಪಕ್ಷಗಳಿಗೂ ಸೇರದವರಾಗಿರಬೇಕು. ನಿಸ್ಪೃಹರಾಗಿ, ಶಾಂತರಾಗಿ ಎರ
ಕಡೆಯವರು ಹೇಳುವುದನ್ನೂ ಕೇಳಿ, ಸ್ಥಿತಿಯನ್ನು ವಿಶದವಾಗಿ ಅರಿ
ತೀರ್ಮಾನ ಮಾಡಬೇಕು. ಅವರದು ದೇಶದ ಅತ್ಯುನ್ನತ ನ್ಯಾಯಸ್ಥಾ
ವಾಗಿರುವಾಗ ತಮ್ಮ ತೀರ್ಮಾನದಿಂದ ಒಂದು ನ್ಯಾಯಸಂಪ್ರದಾಯ
ಏರ್ಪಡುವುದೆಂದೂ ನ್ಯಾಯದ ಶುಚಿ ಶಕ್ಯವಾಗಬೇಕೆಂದೂ ಅದಕ್ಕೆ ಚ್ಯು
ಬಾರದಂತೆ ಹೆಣಗುವರು. ಅವರು ತೀರ್ಮಾನಮಾಡಿದಂತೆ ನ್ಯಾಯ
ಸ್ವರೂಪಲಕ್ಷಣ ನೆಲೆಗೊಳ್ಳುವುದು. ಹಿಂಸೆ, ಅನ್ಯಾಯ, ನಷ್ಟ ಉಂಟು
ಬಾಳು ಹದಗೆಟ್ಟೀತು; ದೇಶದಲ್ಲಿ ಅರಕ್ಷಣೆ, ಅನಿಶ್ಚಯ, ಅಶಾಂತಿ ಉಂಟಾ
ಗಬಹುದು; ದುಷ್ಟರೂ ಹಣವಂತರೂ ಕುಶಲರಾದ ದುರ್ಮಾರ್ಗಿಗಳೂ
ಪ್ರಬಲಿಸಿ ಶಕ್ತಿಯಿಲ್ಲದ ಸಾಮಾನ್ಯರಿಗೆ ಬದುಕು ಕಷ್ಟವಾಗಬಹುದು
ಆದುದರಿಂದ ನ್ಯಾಯದ ರಸ ಬತ್ತದಂತೆ, ಅದರ ಚಿಲುಮೆ ಕದಡದಂತ
—ಅದರ ಕಣ್ಣು ತಿಳಿಯಾಗಿರುವಂತೆ, ಮುಚ್ಚಿಹೋಗದಂತೆ—ಅದರ
ಧೈರ್ಯವೂ, ಸತ್ವವೂ ಬಲವಾಗಿ ಉಳಿಯುವಂತೆ, ಅದರ ತೀರ್ಮಾನದಿಂದ
ಮನುಷ್ಯನ ಶಕ್ತಿ ಅರಳುವಂತೆ ನ್ಯಾಯಾಧೀಶರು ಕಾಪಾಡಿಕೊಡಬೇಕು
ಯಾವ ವ್ಯವಹಾರದಲ್ಲಿ ಒಂದು ಪಕ್ಷಕ್ಕೆ ಸೇರಿದವರು ತಾವೇ ಅದರಲ್ಲಿ
ತೀರ್ಮಾನ ಮಾಡುವ ನ್ಯಾಯಾಧೀಶರೂ ಆಗಬಾರದು. ಬಡವರಾಗಲಿ

ಲ್ಲಿದರಾಗಲಿ, ಶಕ್ತರಾಗಲಿ, ದುರ್ಬಲರಾಗಲಿ, ನ್ಯಾಯಸ್ಥಾನಗಳ ಮತ್ತು ೇಶದ ಕಾನೂನುಗಳ ಇದಿರಲ್ಲಿ ಒಂದೇ ಬಗೆಯ ಗೌರವವನ್ನೂ ನ್ಯಾಯ ನ್ನೂ ಪಡೆಯುವ ಅವಕಾಶ ಇದ್ದರೆ ಜನದಲ್ಲಿ ನಿರ್ಭೀತಿಯೂ ವಿಶ್ವಾಸವೂ ಲೆಗೊಳ್ಳುತ್ತವೆ. ಪ್ರಬಲರ ಭಯದಿಂದ ನಿಜವಾದ ಪ್ರಮಾಣಗಳು ಒದಗ ಂತೆಯೋ, ಅಲ್ಲದ್ದು ಒದಗುವಂತೆಯೋ, ತಿರುಗುಮುರುಗಾಗದಂತೆಯೋ, ಾಕ್ಷಿಗಳ ಧಾರಾಳ ಮುಚ್ಚಿಹೋಗದಂತೆಯೋ ಎರಡು ಪಕ್ಷಗಳವರಿಗೂ ಲ್ಲ ಅವಕಾಶಗಳೂ ಸಮವಾಗಿ ದೊರಕುವಂತೆ ನ್ಯಾಯಸ್ಥಾನಗಳು ವಕಾಶ ಕಲ್ಪಿಸಬೇಕು. ಅವರಿಗೆ ಅಗತ್ಯವೆಂದು ತೋರಿದ ಸಾಕ್ಷಿ ್ರಮಾಣಗಳನ್ನು ಒದಗಿಸಿಕೊಳ್ಳಲು—ಕಡೆಗೆ ಬಲಾತ್ಕಾರದಿಂದಾದರೂ ೇರಿಸಿಕೊಳ್ಳುವ—ಅವಕಾಶ ಇರುವಂತೆ ಸರ್ಕಾರಗಳು ಏರ್ಪಡಿಸುತ್ತವೆ.

ನ್ಯಾಯವಾದಿಗಳು ನ್ಯಾಯದ ಸ್ವರೂಪ ನಿರ್ಣಯದಲ್ಲಿ ಏನು ಪಾತ್ರ ಹಿಸುವರೆಂದು ಹೇಳಿದ ಕಾರಣದಿಂದ ಅವರು ಹಾಗೆಯೇ ಇರಬೇಕೆಂದು ೇಳಿದ ಹಾಗಾಗಲಿಲ್ಲ. ಖಾಸಗಿ ಕುಳಗಳ ಪರ ವಾದಿಸುವ ಖಾಸಗಿ ಜನ ಾದರೂ ನ್ಯಾಯಸ್ಥಾನಗಳಿಗೆ ಅವರಿಂದ ದೊಡ್ಡ ನೆರವುಂಟು. ಅವರು ್ಯಾಯ ವಿವೇಚನೆಗೆ ಸಹಾಯಕರು. ಸ್ವತಂತ್ರರಾದರೂ ಅವರು ಅಧರ್ಮ ಮಾರ್ಗಗಳನ್ನು ಹಿಡಿಯದಂತೆ ನ್ಯಾಯಸ್ಥಾನಗಳು ನೋಡಿಕೊಳ್ಳುತ್ತವೆ. ಲವು ದೇಶಗಳಲ್ಲಿ ಅವರ ವರ್ಗದಿಂದಲೇ ದೇಶದ ನ್ಯಾಯಾಧೀ ರನ್ನು ಆರಿಸುವ, ನೇಮಿಸುವ ಸಂಪ್ರದಾಯವಿರುತ್ತದೆ. ಅವರಲ್ಲಿ ರಿಯ ಮೇಧಾವಿಗಳಿರುತ್ತಾರೆ. ದಿನ ದಿನದ ಪಕ್ಷಸಾಧನೆಗೆ ಬೇಕಾದ ಳಿವಳಿಕೆ, ಶಾಸನಗಳ ಒಳ ಹೊರಗುಗಳ ಸೂಕ್ಷ್ಮಪರಿಜ್ಞಾನ, ಕುಶಲತೆ, ಾದದ ಕುಶಾಗ್ರತೆ ಹೇಗಿರುತ್ತವೆಯೋ ನ್ಯಾಯಪ್ರಪಂಚದಲ್ಲಿ ್ರಬಲಿಸುವ ಶಕ್ತಿಗಳೆಲ್ಲದರ ಅರಿವೂ ಅವರಲ್ಲಿ ಹಲವರಿಗಿರುತ್ತದೆ. ಾವು ಸರಿಯಾಗಿ ನ್ಯಾಯಸ್ಥಾನಗಳಲ್ಲಿ ನಡೆದುಕೊಳ್ಳುವವರೆಗೂ ಅವ ಗೆ ಅಡ್ಡಿ ಆತಂಕ ಇರುವುದಿಲ್ಲ. ಶಾಸನ ರಚನೆಯಲ್ಲಿಯೂ ವ್ಯವಸ್ಥೆ

ಯಲ್ಲಿಯೂ ಇರುವ ಲೋಪದೋಷಗಳನ್ನು ಅವರು ಬಲ್ಲವರು. ಅ
ರಿಂದ ಅವನ್ನು ಸುಧಾರಿಸಲೂ ಅವರ ಸಹಾಯ ಅಗತ್ಯ. ಆದುದರಿಂದ
ಶಾಸನ ಸಭೆಗಳಲ್ಲಿ, ಶಾಸನ ರಚನೆಯ ಒಂದು ಮಜಲಲ್ಲಿ ಮುಖ್ಯವ
ಇವರ ಸಹಾಯವನ್ನು ಕೋರುವುದು. ಸತ್ಯ ನ್ಯಾಯಗಳ ಸ್ಥಾಪನೆ
ದೋಷವನ್ನು ಹೊರಹಾಕುವುದಕ್ಕೆ, ನಿರಪರಾಧಿಗಳನ್ನು ಕಾಪಾಡುವುದ
ನ್ಯಾಯ ವಿವೇಚನೆಯನ್ನು ಪರಿಶೋಧಿಸುವುದಕ್ಕೆ ನ್ಯಾಯಸ್ವರೂಪವನ
ನಿಷ್ಕರ್ಷಿಸುವುದಕ್ಕೆ ಅವರ ಸಹಾಯವಿಲ್ಲದೆ ಬೇರೆ ದಾರಿಯಿಲ್ಲ. ಅವ
ಹಲವು ವೇಳೆ ನ್ಯಾಯಕ್ಕೆ ಒಂದು ಹೊಸ ಕಣ್ಣೂ, ಹೊಸ ವ್ಯಾಪ್ತಿಯ
ಬರಬೇಕೆಂದು ವಾದಿಸಬಲ್ಲವರು; ಸೂಚಿಸಬಲ್ಲವರು. ನ್ಯಾಯಾಧೀಶರಿ
ಒಂದು ಬಲವನ್ನೂ ಒಂದು ಹೊಸ ವಿವೇಚನಾಮಾರ್ಗವನ್ನೂ ತೋರಿಸಬ
ವರು. ಆದರೂ ಬಹುವೇಳೆ ಅವರ ದೃಷ್ಟಿ ಸಂಕುಚಿತ ದೃಷ್ಟಿಯಾದೀತ
ತಕ್ಷಣದ ಪ್ರಯೋಜನವೇ ಅವರ ಗುರಿಯಾದ್ದರಿಂದ ಅವರ ಪ್ರಯೋ
ನಕ್ಕೆ ಮಿತಿ ಬರುತ್ತದೆ. ಇರುವ ಸ್ಥಿತಿಯನ್ನು ಸ್ಥಾಪಿಸುವ ಕೆಲಸದಲ್ಲಿಯೆ
ಆ ಬುದ್ಧಿ ತೊಡಗುತ್ತದೆ. ಮುಂದೆ ನುಗ್ಗಿ ಹೊಸ ದರ್ಶನವನ್ನು
ಕಾಣಿಸುವ ಕೆಲಸ ಅವರದಾಗದೆ ಹೋಗಬಲ್ಲುದು. ಯುಕ್ತಿವಾದ
ಕಾರ್ಯಲೋಪ, ದೋಷ ಎತ್ತಿ ಹಾಕುವುದು, ವಿರೋಧಪಕ್ಷವನ್ನು ಉರು
ಸುವುದು, ತಮ್ಮ ಪಕ್ಷವನ್ನು ಎತ್ತಿ ನಿಲ್ಲಿಸಿ ಗೆಲ್ಲುವುದು ಇವು ಅವರ
ಕಾರ್ಯಮಂಡಲ. ಆದರೂ ಇಷ್ಟು ನಿಜ: ಸಮಾಜದ ಮುನ್ನಡೆಯಲ್ಲಿ
ನ್ಯಾಯಧರ್ಮಗಳ ಸ್ಥಾನವೇನು ಎಂದು ಸಂತತವಾಗಿ ಚಿಂತಿಸಬಲ್ಲ
ನ್ಯಾಯವಿದರಿಂದಲೇ ಲೋಕ ಹಿತಸಾಧನೆಯೂ ಕಾನೂನಿನ ಪರಿಷ್ಕಾರವೂ
ಆಗಬಲ್ಲದು.

## ಧರ್ಮಸಾಧನೆ

ನ್ಯಾಯಶಾಸ್ತ್ರ, ಧರ್ಮಶಾಸ್ತ್ರ ಎರಡನ್ನೂ ಪರಿಶೀಲಿಸಿ ಇರುವ
ಕಾನೂನುಗಳಿಂದ ನ್ಯಾಯ ಎಷ್ಟು ಮಟ್ಟಿಗೆ ಸಾಧಿತವಾಗುತ್ತಿದ

ಕಾನೂನೂ ನ್ಯಾಯವಿಮರ್ಶೆಯೂ ಇನ್ನು ಹೇಗೆ ಬೆಳೆದರೆ ದೇಶದಲ್ಲಿ ಧರ್ಮಪ್ರತಿಷ್ಠಾಪನೆ ಉತ್ತಮವಾದೀತು ಎಂಬ ವಿಮರ್ಶೆ ಬೆಳೆಯುವುದು ಅಗತ್ಯ. ಸಮಾಜದ ಜೀವನ ವಿಸ್ತಾರವಾದ ಹಾಗೆಲ್ಲ ಈ ಕಾರ್ಯ ವಿಸ್ತಾರವಾಗುತ್ತದೆ. ಜನದ ಬುದ್ಧಿಶಕ್ತಿ, ಅಗತ್ಯ, ಲಾಭ ಆಶೆ ಆಕಾಂಕ್ಷೆಗಳು ವಿಧವಿಧವಾದ ಹಾಗೆಲ್ಲ ಇದರ ವೈವಿಧ್ಯ ಹೆಚ್ಚುವುದು. ಜನರ ಬುದ್ಧಿಶಕ್ತಿ ಸೂಕ್ಷ್ಮವಾದ ಹಾಗೆಲ್ಲ ಸೂಕ್ಷ್ಮವಾಗುವುದು. ಕ್ಷೇಮ, ಧರ್ಮ ಎಂಬ ವಿಚಾರಗಳಲ್ಲಿ ಜನದ ಮುಂದಾಳುಗಳಿಗೆ ಯಾವ ಯಾವ ಹೊಸದರ್ಶನವೂ ವಿಧಾನಗಳೂ ಮನಸ್ಸಿಗೆ ಬರುವವೋ. ಅವುಗಳನ್ನೆಲ್ಲ ಕಾನೂನು ಒಳಗೊಳ್ಳುವಂತೆ ಮಾಡಬೇಕಾಗುವುದು. ನೀತಿಶಾಸ್ತ್ರ, ಸಮಾಜದ ಬೆಳವಣಿಗೆಯ ಶಾಸ್ತ್ರ, ಸುತ್ತಲ ಪ್ರಪಂಚದ ಸೂಕ್ಷ್ಮವಾದ ಅರಿವು, ಆಯಾ ಕಾಲದ ದೃಷ್ಟಿ, ಪ್ರಗತಿದೃಷ್ಟಿ, ನಾಳೆಯ ಪ್ರಯೋಜನ, ಜನ ಯಾವ ಯಾವುದಕ್ಕೆ ಹೆಚ್ಚು ಬೆಲೆ ಕೊಡುತ್ತಿದ್ದಾರೆ, ಯಾವ ಕಡೆ ಯಾವ ರೀತಿ ಉತ್ಸಾಹಗೊಂಡಿದ್ದಾರೆ ಎಂಬವನ್ನೂ ಗುರಿಗತಿಗಳನ್ನೂ ಯಾರು ಅರಿತಾರೊ ಅವರು ಒಂದು ಹೆಜ್ಜೆ ಮುಂದುಹೋಗಿ ಅವನ್ನು ಕ್ಷೇಮಕ್ಕೆ ನಡಸಬಲ್ಲರು. ಉದಾರವಾದ ಮನಸ್ಸು ಯಾರಿಗಿದೆಯೋ ಅಂಥವರು ಧರ್ಮದರ್ಶಿಗಳಾಗಿ ಕಾನೂನನ್ನೂ ನ್ಯಾಯಪದ್ಧತಿಯನ್ನೂ ವಿಶಾಲ ಮಾರ್ಗಗಳಲ್ಲಿ ಸಂಸ್ಕರಿಸಬೇಕು. ಎಲ್ಲಿಯೇ ಆಗಲಿ ಜನದ ಧರ್ಮಬುದ್ಧಿಗೆ ಒಳಪಟ್ಟೇ ಆ ದೇಶದ ನ್ಯಾಯಪದ್ಧತಿಯೂ ಕಾನೂನೂ ಇರುತ್ತವೆ. ಧರ್ಮಬುದ್ಧಿ ಜಾಗ್ರತವಾಗಿದ್ದರೆ ಇವೂ ಜಾಗ್ರತ. ಅದು ಜಡವಾದರೆ ಇದೂ ಜಡ. ಯಾವ ನಾಡಿನ ಜನ ಸಂತತವಾಗಿ ಬಹುಮುಖವಾದ ಜೀವನವನ್ನು ಸಾಧಿಸಲಾರರೋ ಎಲ್ಲಿನ ಮೇಧಾವಿಗಳಿಗೆ ಧರ್ಮವಿಚಾರದಲ್ಲಿ ಅಸಡ್ಡೆಯೋ ಅಲ್ಲಿ ಧರ್ಮವು ಸ್ಥಾಪಿತವಾಗಲೂ ಬೆಳೆಯಲೂ ಅನುಕೂಲಪರಿಸ್ಥಿತಿ ಇರದು. ಜನ ಎಷ್ಟು ದೊಡ್ಡವರಾದರೆ ಅ ಕಾನೂನು, ನ್ಯಾಯ, ಧರ್ಮ ಅಷ್ಟು ದೊಡ್ಡವಾಗಿ ಮೂರ್ತಿಗೊಳ್ಳಬಲ್ಲವು.

## ಧರ್ಮ—ಕಾನೂನು

ಧರ್ಮಬುದ್ಧಿ ಎಂದಿಗೇ ಆಗಲಿ ಎಲ್ಲಿಯೇ ಆಗಲಿ ಮೊದ ಕೆಲವರಿಂದ, ಅವರ ನಡತೆ ಮಾತುಗಳಿಂದ, ಅವರ ದರ್ಶನ ಉಪದೇ ಪ್ರಚಾರಗಳಿಂದ ತೊಡಗುವುದು. ಆ ಮೇಲೆ ಹತ್ತು ಜನರಲ್ಲಿ ಹರ ಹತ್ತು ಮಂದಿಯ ಸೊತ್ತಾಗುವುದು. ಆ ಹತ್ತು ಮಂದಿಯ ಉತ್ಸಾಹ ಕೆರ ವುದು. ಪರಿಸ್ಥಿತಿಯ ಲೋಪದೋಷಗಳು ಆಗ ಕಾಣುವುವು. ಅವನ್ನು ತಿ ಬೇಕು ಎಂಬ ಉತ್ಸಾಹ ಆಗ ಪ್ರಬಲಿಸಬಲ್ಲದಾಗುವುದು. ಆವರೆಗಿ ಸ್ಥಿತಿ ಗತಿಗಳನ್ನು ನಡಸಿಕೊಡುತ್ತಿದ್ದ ಕಾನೂನುಗಳಿಗೆ ಒಂದ ಹೊಸ ರೂಪವನ್ನು ಕೊಡಲು, ಅಥವಾ, ಅವನ್ನು ಹಿಗ್ಗಿಸಲು, ಹೊ ಬೇರೆಯವನ್ನು ಉಂಟುಮಾಡಲು ಈ ಎಲ್ಲ ಮೂಲಕ ಹೊಸ ಧಮ ಬುದ್ಧಿಯ ಎತ್ತಿಗೆ ಕಾನೂನನ್ನೂ ನ್ಯಾಯವಿವೇಚನೆಯನ್ನೂ ಎತ್ತಿ ನಡಸುವುದು ಶಕ್ಯವಾಗುವುದು. ಧರ್ಮಬುದ್ಧಿ ಮುಂದೆ ನಡೆದರೆ, ದಾ ತೋರಿಸುತ್ತಿದ್ದರೆ ಕಾನೂನು ಹಿಂದೆಹಿಂದೆ ಕುಂಟಿಕೊಂಡಾದರೂ ನಡೆಯ ಲಾಗುತ್ತದೆ. ಅದರ ಜೊತೆಗೂ ಕಾನೂನು ಸರಿಸಮನಾಗಿ ಎಲ್ಲಿಯೂ ನಡೆಯದು. ಅದನ್ನು ಹಿಂದಕ್ಕೆ ಸೆಳೆಯುವ ಪ್ರಭಾವಗಳೇ ಹೆಚ್ಚು ಮುಂದಿನ ದರ್ಶನವನ್ನು ಕಂಡು ಧರ್ಮಬುದ್ಧಿ ಅದರಸಾಧನಕ್ಕೆ ಹಾತೊರೆಯುತ್ತಿರುತ್ತದೆ, ನುಗ್ಗುತ್ತಿರುತ್ತದೆ; ಮಂಗಳದ ಹೊಸ ಸ್ವರ್ಗ ಗಳನ್ನು ಕನಸಿನಲ್ಲಿ ಎಂಬಂತೆ ಕಂಡು ತನ್ನ ಆಶೆಯ ಕೈ ಚಾಚುತ್ತಿರುತ್ತದೆ. ಅದರ ಇಂದಿನ ಕನಸು ನಾಳೆಗೋ ನಾಡಿದ್ದಿಗೋ ಕಾನೂನಾದೀತು. ಜೂಜಿನ ಕುದುರೆಯಂತೆ ಧರ್ಮ ಓಟಕ್ಕೆ ತಯಾರಾದ್ದು. ಕಾನೂನು ಸಾಮಾನೆಳೆಯುವ ಗಾಡಿಯ ಕುದುರೆಯಂತೆ. ಅದು ಕುದುರೆಯೂ ಅಲ್ಲ; ಎತ್ತು.

ಕಾನೂನಿನ ನಡಗೆ ಬಹು ಮಟ್ಟಿಗೆ ಮಂದವಾದ ನಡಗೆ, ಸಂಪ್ರದಾ ಯದ ನಡಗೆ, ಸದ್ಯದ ಪ್ರಯೋಜನ ದೃಷ್ಟಿಗಳ ನಡಗೆ. ಅದು ಬೇರೆಯಾ

ಗಲು ಶಕ್ಯವಿರುವುದಿಲ್ಲ. ಅದು ಬೇಗ ಬೇಗ ಮಾರ್ಪಟ್ಟರೂ ಕಷ್ಟವೇ: ಅರಿಯದ ಜನಕ್ಕೆ ದಿಗ್ಭ್ರಮೆ ಆಗುವ ಸಂಭವ ಉಂಟು. ಹಿಂದಿನದನ್ನು ತಿಳಿಯುವ ಒಳಗಾಗಿ ಬೇರೊಂದು ಹೊಸ ವಿಧಿ ಹುಟ್ಟಿದರೆ ಯಾವುದೂ ಖಚಿತವಿಲ್ಲ, ನಿಶ್ಚಯವಿಲ್ಲ ಎಂಬ ಭಾವನೆ ಜನಕ್ಕೆ ಬರುವುದು. ಅಂಥ ಸ್ಥಿತಿಯಲ್ಲಿ ಸಾಧಾರಣರ ಮನಸ್ಸು ಊರೆ ಇಲ್ಲದಾಗುವುದು. ಪ್ರತಿಯೊಂದು ಸ್ಥಿತಿಗೂ ತಕ್ಕಂತೆ ಸಂಸ್ಥೆಗಳೂ ಜನವರ್ಗಗಳೂ ನಿರೀಕ್ಷಣೆ ಇಟ್ಟುಕೊಂಡಿರುವರು; ಬೆಳಸಿಕೊಂಡಿರುವರು. ಒಪ್ಪಂದಗಳೂ ನಿರೀಕ್ಷೆಗಳೂ ಹಣ್ಣಾಗಿ ಲಾಭಾಲಾಭ ಉಂಟಾಗುತ್ತಿರುವುವು. ಕಾನೂನು ಬಹು ಬೇಗಬೇಗ ಮಾರ್ಪಾಡಾದರೆ ಸಮಾಜದ ಒಳಜೀವನದಲ್ಲಿ ಅನೇಕ ಬಗೆಯ ತೊಡಕು, ಕೋಟಲೆ ಉಂಟಾಗುವುದು ಖಂಡಿತ. ಆದುದರಿಂದಲೇ ಕಾನೂನನ್ನು ಕನ್ಸರ್ವೆಟಿವ್, (ಮಂದಗಾಮಿ), ಸಾಂಪ್ರದಾಯಕ, ಎನ್ನುವುದುಂಟು. ಕನ್ಸರ್ವೆಟಿವ್ ಎಂದಮಾತ್ರಕ್ಕೇ ದೋಷವೇನಿಲ್ಲ. ಇರುವುದನ್ನು ಉಳಿಸುವ, ನಡಸುವ ಸ್ಥಿತಿನಿಷ್ಠಪ್ರವೃತ್ತಿ ಅದು. ಮುನ್ನಡೆಯನ್ನು ಸಾಧಿಸಬೇಕಾದಾಗ ಗೊತ್ತಾಗಿ ಸ್ಥಿತಿ ಇದು ಎಂಬುದರ ಸೂಚಿಕೆಯಾದರೂ ಒಂದು ಬೇಕಲ್ಲವೆ? ಅದನ್ನು ಕಾನೂನೂ ನ್ಯಾಯ ವಿಮರ್ಶೆಯೂ ಮಾಡಿಕೊಡುವುವು. ಹೊಸ ಅಗತ್ಯಕ್ಕೂ ದೃಷ್ಟಿಗೂ ತಕ್ಕಂತೆ ಹೊಸ ಕಾನೂನು ಕಲ್ಪಿತವಾದ ಹಾಗೆಲ್ಲ ಜೀವನದ ವಿಶಾಲತೆ ಕಾನೂನಲ್ಲಿ ಪ್ರತಿಬಿಂಬಿಸಲು ಅವಕಾಶವಾಗುತ್ತದೆ.

ನ್ಯಾಯವನ್ನು ಧರ್ಮವನ್ನಾಗಿ ಮಾಡುವ ಅಂಶಗಳಲ್ಲಿ ಬಹು ದೊಡ್ಡದು ಲೋಕಕಾರುಣ್ಯ; ಲೋಕಕಲ್ಯಾಣ ಅಥವಾ ಲೋಕಹಿತಬುದ್ಧಿ. "ದಯವಿಲ್ಲದ ಧರ್ಮವಾವುದಯ್ಯ" ಎಂದ ಬಸವಣ್ಣನವರ ಮಾತು ಇಲ್ಲಿ ಮೂಲಮಂತ್ರ, ಸಮಗ್ರತಂತ್ರ. ಧರ್ಮ, ಧರ್ಮವಾಗಬೇಕಾದರೆ ಅದರಲ್ಲಿ ದಯೆ ಇರಬೇಕು. ಧರ್ಮದ ಒಂದು ಕಣ್ಣು ಕಠೋರ, ನಿಷ್ಠುರ; ಶಿಕ್ಷಾದರ್ಪದಿಂದ ಕೂಡಿದ್ದು; ಉಗ್ರವಾದದ್ದು; ಘಾತಕರಿಗೂ ದುಸ್ಸಾಹಸಿಗಳಿಗೂ

ಭಯಂಕರವಾದದ್ದು; ಅವರನ್ನು ಅಡಗಿಸತಕ್ಕದ್ದು ನಿಷ್ಪಕ್ಷಪಾತವುಳ್ಳದ್ದು
ಸತ್ವವೊಂದರಲ್ಲಿ ನಿಷ್ಠವಾದ್ದು ; ನಿರ್ವಂಚನೆಯಿಂದ ಕೂಡಿದ್ದು ; ನಿಶ್ಚ
ವಾದದ್ದು. ಇನ್ನೊಂದು ಕಡೆ ಅದರ ದೃಷ್ಟಿ ಮಾನವಸಹಜವಾದ ದುಬ
ಲತೆಯನ್ನೂ ಚಪಲತೆಯನ್ನೂ ಚೆನ್ನಾಗಿ ಅರಿತದ್ದು. ಮನುಷ್ಯನನ
ದುರ್ಬಲಗೊಳಿಸುವ ಪ್ರವೃತ್ತಿ ಪ್ರಭಾವಗಳನ್ನೂ ರಾಗದ್ವೇಷಗ
ಸ್ವರೂಪವನ್ನೂ ಚೆನ್ನಾಗಿ ಅರಿತದ್ದು. ಕಾರ್ಯಗಳು ನಡೆಯುವ ಎ
ಪ್ರಸಂಗಗಳನ್ನೂ ಸೂಕ್ಷ್ಮವಾಗಿ ಅರಿತು, ಅಪರಾಧಿಗಳು ಏಕೆ ಅಪರಾ
ಗಳಾದರು ಎಂಬುದನ್ನು ಸಹಾನುಭೂತಿಯಿಂದ ಒಳಹೊಕ್ಕು ಅರಿ
ಬಲ್ಲದ್ದು. ಎಲ್ಲಕ್ಕೂ ತಕ್ಕಂತೆ ಬೆಲೆ ಕಟ್ಟಬಲ್ಲದ್ದು. ಎಲ್ಲಿ ದಯೆ, ಮೃದುತ
ಔದಾರ್ಯ ಅಗತ್ಯವೋ ಅಲ್ಲಿ ಅದು ಕೃಪೆಯಿಂದ ನಡೆಯಬಲ್ಲದ್ದಾಗಬೇಕು
ಇದು ಕಾಪಾಡುವ ಕೈ ಹೇಗೋ ಹಾಗೆಯೇ ಬದುಕಿಸುವ, ಬೆಳಸುವ
ಪತಿತರನ್ನು ಮೇಲೆತ್ತುವ ಕೈ ಆಗಬೇಕು. ಅದು ಹಾಗೆ ಆದಾಗಲೆ
ಧರ್ಮಕ್ಕೆ ಮಹಾಸತ್ವವೆಂಬ ಕೀರ್ತಿ, ಪ್ರಭಾವ, ಗೌರವ. ಧರ್ಮವೆಂಬುದ
ಧರ್ಮ ಸೂಕ್ಷ್ಮದಲ್ಲಿದೆ ಎನ್ನಬಹುದು. ಯಾವೊಂದು ಜಟಿಲ ಪ್ರಸಂಗ
ದಲ್ಲಿಯೇ ಆಗಲಿ ವಿಷಯ ಪೂರ್ತಿ ಪರಿಶೀಲನೆ ಆಗಿ ಆ ವ್ಯವಹಾರದಲ್ಲಿ
ಕಡೆಯಲ್ಲಿ ಕಾನೂನಿನ ಯಾವ ಅರ್ಥ ಎಷ್ಟು ಹೊಂದುತ್ತದೆ ಎಂಬ ವಿವೇ
ಚನೆಯಲ್ಲಿಯೂ, ತೀರ್ಮಾನದಲ್ಲಿಯೂ ಧರ್ಮಸೂಕ್ಷ್ಮ ನೆಲಸಿರುತ್ತದೆ

ಒಂದು ಉದಾಹರಣೆಯನ್ನು ಕೊಟ್ಟು ಇದನ್ನು ಸ್ಪಷ್ಟಪಡಿಸಬಹುದು ;
ಮುಗಿಸಬಹುದು. ಮಹಾಭಾರತದ ಸಭಾಪರ್ವದಲ್ಲಿ ನಡೆದುದು ದ್ರೌಪ
ದಿಯ ಅಪಮಾನದ ಸಂಗತಿ. ಯುಧಿಷ್ಠಿರನು ದುರ್ಯೋಧನನಿಗೆ ಪಗಡೆ
ಆಟದಲ್ಲಿ ಸೋತಿದ್ದಾನೆ. ರಾಜ್ಯ, ಕೋಶ, ಎಲ್ಲ ಆಸ್ತಿ, ತಮ್ಮಂದಿರು,
ತಾನು, ಹೆಂಡತಿ—ದ್ರೌಪದಿ ಎಲ್ಲವನ್ನೂ ಸೋತಿದ್ದಾನೆ. ಸೋತವರು
ಗೆದ್ದವರಿಗೆ ಎಲ್ಲವನ್ನೂ ಒಪ್ಪಿಸಬೇಕು. ಒಡೆಯರು ನಡಸಿದಂತೆ ನಡಸಿ
ಕೊಳ್ಳಬೇಕು. ದುರ್ಯೋಧನನು ಈ ಎಲ್ಲದರ ಒಡೆಯ. ತುಂಬಿದ ಸಭೆಗೆ

ದ್ರೌಪದಿ ಬರುವಂತೆ ಹೇಳಿ ಕಳುಹಿಸುತ್ತಾನೆ. ತನಗೆ ಸೇರಿದ ಪದಾರ್ಥವನ್ನು ಎಲ್ಲಿಗೆಂದರೆ ಅಲ್ಲಿಗೆ ಕರಸುವ, ಹಿಡಿದು ತರಿಸುವ ಅಧಿಕಾರ ಒಡೆಯನಿಗೆ ಇದೆ. ಇಷ್ಟವಿಲ್ಲದ ದ್ರೌಪದಿಯನ್ನು ಅವನ ತಮ್ಮ ದುಶ್ಯಾಸನನು ಒಯ್ದು ತರುತ್ತಾನೆ. ಜೀವದಲ್ಲಿ ಜೀವವಿಲ್ಲದೆ ಒಂದು ಬಟ್ಟೆ ಉಟ್ಟಿದ್ದ ದ್ರೌಪದಿಯನ್ನು ಅವನು ಎಳೆದೂ ತಂದನಂತೆ. ಮೇಲೆ ಹೊದ್ದ ವಸ್ತ್ರವನ್ನು ದಾಸನು ತೆಗೆಯಬೇಕು ಎನ್ನುವುದು ಕೂಡ ಒಡೆಯರ ಹಕ್ಕು. ಒಡೆಯರೆದುರಿಗೆ ಮೇಲು ಬಟ್ಟೆ ಹೊದೆಯುವುದು ಆಳಿಗೆ ಹಕ್ಕಲ್ಲವೇನೋ! ವಸ್ತ್ರ ತೆಗೆಯಬೇಕೆಂದು ಆಕೆಗೆ ಕೇಳಿದರೋ ಇಲ್ಲವೋ ಅದು ಈಗ ಬೇಡ. ತುಂಬಿದ ಸಭೆಗೆ ಹೆಂಗಸನ್ನು, ಮನೆಯ ಸೊಸೆಯನ್ನು, ರಾಜಸೂಯದಲ್ಲಿ ಅಭಿಷೇಕ ಮಾಡಿಸಿಕೊಂಡ ಚಕ್ರವರ್ತಿನಿಯನ್ನು ತಂದು ನಿಲ್ಲಿಸುವುದು ದುರ್ಮಾರ್ಗ. ಆದರೆ ಒಡೆಯ—ಸೇವಕರಿಗೆ ಸಂಬಂಧಿಸಿದ ಕಾನೂನು ಇದಕ್ಕೆ ವಿರೋಧವೇನಲ್ಲ. ಒಡೆಯ ಒಡವೆ—ಈ ಸಂಬಂಧದಲ್ಲಿ ಈ ವರ್ತನೆ ಯುಕ್ತ. ಆಕೆ ಪ್ರಶ್ನೆ ಮಾಡುತ್ತಾಳೆ: "ಯುಧಿಷ್ಠಿರನು ಮೊದಲು ತನ್ನನ್ನು ಸೋತನೆ? ನನ್ನನ್ನು ಸೋತನೆ? ಹೀಗೆಲ್ಲ ಮಾಡುವುದು ಸರಿಯೆ?" ಎಂದು. ತುಂಬಿದ ಸಭೆಯನ್ನು ಕುರಿತು, 'ಹಿರಿಯರಿಲ್ಲದ್ದು ಸಭೆಯಲ್ಲ, ಧರ್ಮವನ್ನು ಅರಿಯದವರು ಹಿರಿಯರಲ್ಲ, ಇದು ಧರ್ಮವೆ? ತಿಳಿಸಿ" ಎನ್ನುವಳು. ಆ ಸಭೆ ಸಭೆಯೇ ಸರಿ. ಅಲ್ಲಿ ಲೋಕೈಕವೀರರಾದ ಆಕೆಯ ಪತಿಗಳಿದ್ದರು, ಮೈದುನರಿದ್ದರು, ಗುರುಗಳಿದ್ದರು, ಹಿರಿಯರಿದ್ದರು. ಯಾರಿಗೂ ಉತ್ತರ ಕೊಡಲು ಬಾಯಿಬರಲಿಲ್ಲ. ದುರ್ಮಾರ್ಗರೂ ಪ್ರಬಲರೂ ಆದ ಕೆಲವರ ಹೊರತು ಉಳಿದವರಿಗೆ ಇದು ಅಧರ್ಮವೆಂದು ಗೊತ್ತು. ಉತ್ತರ ಹೇಳಲು ಮಾತ್ರ ಯಾರಿಗೂ ಧೈರ್ಯವಿಲ್ಲ. ಅವರ ನಾಲಿಗೆ ಸೇದಿತ್ತು. ಒಬ್ಬ ಹುಡುಗ, ವಿಕರ್ಣನೆಂಬವನು, ಎದ್ದು ಇದು ಸರಿಯಲ್ಲ ಎಂದಾಗ ಯುವಕನ ಮನಸ್ಸು ಹೇಗೆ ಉದಾರವಾಗಿ ಧೈರ್ಯದಿಂದಲೂ ಸ್ವಾತಂತ್ರ್ಯದಿಂದಲೂ ವರ್ತಿಸಿತೆಂಬುದು ತಿಳಿ

ಯುತ್ತದೆ. ಆ ಯುವಕನ ಅಡಗಿಸಲಾಗದ ಧೈರ್ಯ ಧರ್ಮದ ವಾ
ಅದನ್ನು ಬೆದರಿಸಿ, ಗದರಿಸಿ, ಬಾಯಿ ಮುಚ್ಚಿಸಿ, ಅದುಮಿ ಕೂಡಿಸಿದ
ಅದು ಕ್ಷಾತ್ರವಾಗಿ ನಿಂತಿದ್ದರೆ ಧರ್ಮಶಕ್ತಿಯಾಗುತ್ತಿತ್ತು.

ಉಳಿದವರೆಲ್ಲ ಸುಮ್ಮನಿರಲು ಕುಲಪಿತಾಮಹನೂ, ಸಭೆಗೆಲ್ಲ ಹಿರಿಯನ
ಆದ ಭೀಷ್ಮನು ಮಾತ್ರ ಒಂದು ಮಾತನ್ನು ಹೇಳುತ್ತಾನೆ: "ತಾಯಿ, ನಿ
ಪ್ರಶ್ನೆ ಸಹಜ. ಇದಕ್ಕೆ ಉತ್ತರ ಕೊಡಬೇಕಾದವನು ಯುಧಿಷ್ಠಿ
ಆತನು ನ್ಯಾಯವಾಗಿ ಆಟದಲ್ಲಿ ಸೋಲಲಿಲ್ಲ ಎನ್ನಲಿ, ನಡೆದು
ಅಧರ್ಮವೆನ್ನಲಿ, ಸಭೆ ಪರಿಶೀಲಿಸಬಹುದು; ಒಂದು ನಿರ್ಣಯಕ್ಕೆ ಬ
ಬಹುದು" ಎಂದನು. ಯುಧಿಷ್ಠಿರನು ಮಾತನಾಡಲಿಲ್ಲ. ಏನಾಡಿಯಾನು
ತಲೆಬಾಗಿ ಸುಮ್ಮನಿದ್ದನು: ಒಪ್ಪಿ ಆಟವಾಡಿ ಆಗಿದೆ. ಆಟದ ನೇ
ಗಳನ್ನು ಅವನು ಅರಿತವನು. ಪಣವಿಟ್ಟಿದ್ದಾನೆ, ಸೋತಿದ್ದಾನೆ. ಅದ
ಫಲ ಪರಿಣಾಮವನ್ನೂ ಅರಿತವನಾಗಿದ್ದಾನೆ. ಆ ಕಾಲದ ನೇಮಗಳಂ
ಇದು ನ್ಯಾಯವಿರುದ್ಧವಲ್ಲ. ಭೀಮಾದಿಗಳು ಕೋಪಗೊಂಡುದನ್ನು
ಕಂಡಿದ್ದಾನೆ. ಸಭೆ ತಲೆ ತಗ್ಗಿಸಿ ಹಗೆ ವಿಜೃಂಭಿಸಿರುವುದನ್ನು ನೋಡ
ತ್ತಿದ್ದಾನೆ. ಎದುರಿಗೆ ಬಂದು ನಿಂತು ತಾನು ಮಾಡಿದ ತಪ್ಪು ತನ್ನ
ಹೆಂಡತಿಯ ಕರುಣಾಜನಕವಾದ ರೂಪವನ್ನು ತಾಳಿ ತನ್ನನ್ನು ಹಳಿಯು
ತ್ತಿದೆ, ಕರುಳು ಕಿವಿಚುತ್ತಿದೆ. ಆ ದೃಶ್ಯವನ್ನು ಕಾಣುತ್ತಿದ್ದಾನೆ. ಹೆಣ್ಣಿ
ಮಾನ, ದೊಡ್ಡ ಸಭೆಯ ಮುಂದೆ ದೀನವಾಗಿ ಕೃಪೆ ಬೇಡುತ್ತಿದೆ. ಆ ಹೆಣ್ಣು
ಕೈಹಿಡಿದ ಹೆಂಡತಿ. ಅನ್ಯಾಯ ಆಯಿತೆಂದು ನುಡಿದರೆ ಒಂದು ಬಗೆಯ
ತಪ್ಪು. ತಾನೇ ಒಪ್ಪಿ ಮಾಡಿಕೊಂಡ ಒಪ್ಪಂದದಂತೆ ಈಗ ನಡೆಯೆನ
ಎಂದಂತಾಗುತ್ತದೆ. ಒಪ್ಪಂದ ಸರಿಯೆಂದರೆ ಮುಂದಿನ ಇದೆಲ್ಲ ಅಗತ್ಯ
ಅನಿವಾರ್ಯ. ಆದ್ದರಿಂದಲೇ ತಲೆ ತಗ್ಗಿಸಿದುದು. ಅಪರಾಧಿಯಾದವನ
ನಾನು ಸರ್ವಥಾ ಅಪರಾಧಿ ಎಂದು ಹೇಳಿಕೊಳ್ಳುತ್ತಿರುವಾಗ, ಯಾವ
ನ್ಯಾಯವಾದಿ, ಯಾವ ಸಭೆ, ಯಾವ ನ್ಯಾಯಾಧೀಶವರ್ಗ ಆತನನ್ನು

ಜ್ಜುದ್ಧಾರ ಮಾಡಬಲ್ಲದು? ಆದ್ದರಿಂದ ಸಭೆ ಅವಾಕ್ಕಾಯಿತು. ಉಳಿ ರವರು ಹೇಗೇ ಇರಲಿ—ವೃದ್ಧ ವಿದುರನೊಬ್ಬನಿಗೆ ಮಾತ್ರ ಕೊರಳ ಸೆರೆ ಗಿಗಿಯಿತು, ಕತ್ತು ಕಿವಿಚಿತು, ಎದೆ ಒಡೆದು ನೀರಾಯಿತು. ಅವನು ದಾಸೀಪುತ್ರನಂತೆ! ಅವನಿಗೆ ತೋರಿದ ಧರ್ಮದ ದಯಾರ್ದ್ರತೆ ಉತ್ತಮರಲ್ಲಿ ಬೆಳಗಲಿಲ್ಲ. "ಈ ಸಭೆ ಒಪ್ಪುತ್ತಿರುವುದು ಅಧರ್ಮ, ಇದು ಸರಿಯಲ್ಲ, ಇಂಥ ಸಭೆಗೆ ತಕ್ಕುದಲ್ಲ, ಇದು ಮಾನವತೆಯಲ್ಲ, ಧರ್ಮದ್ರೋಹ"* ಎನ್ನುತ್ತಾನೆ. ವಿದುರನಿಗಿರುವ ಧರ್ಮಕೀರ್ತಿ ಈ ಕಾರಣದಿಂದ.

ಯುಧಿಷ್ಠಿರ, ಭೀಷ್ಮ, ದುರ್ಯೋಧನ ಇವರು ನಡೆದ ನಡತೆ ಅಥವಾ ನಡಸುವ ಧರ್ಮ ಕೇವಲ ಕಾನೂನಿನ ಮಟ್ಟದ್ದು. ತಮ್ಮ ಕಾಲದಲ್ಲಿ ನಡೆಯಬಹುದಾದ ಒಣ ಕಾನೂನಿಗಾಗಿ ಅದು ಅಧರ್ಮವನ್ನು ಒಪ್ಪಿತು; ಅಥವಾ ಇಂಥ ಸ್ಥಿತಿಯ ಎದುರು ನಿರ್ಬಲವಾಯಿತು. ಕಾನೂನನ್ನು ಮೀರಿ ಧರ್ಮದ ಕಡೆಗೆ ಒಲೆದು, ಧೀರವಾಗಿ ನಡೆಯಲು—ಯಾವುದೇ ಕಾರಣದಿಂದಾಗಲಿ—ಅಶಕ್ತವಾಯಿತು. ಕಿರಿಯನಾದ ವಿಕರ್ಣನ ಧೈರ್ಯ, ಹಿರಿಯನಾದ ವಿದುರನ ಮಹಾಮಾನವೀಕರುಣೆ ಇವೆರಡೇ ಧರ್ಮದ ಮೂಲ ಅಂಶಗಳು; ಅದರ ಆಧಾರ ಸತ್ವಗಳು. ಅಂಥ ಸಮಯ ಗಳಲ್ಲಿ ಕಾನೂನು ಸರ್ವಥಾ ಮೀರಬೇಕಾದ್ದೇ ಸೈ. ಈ ಸಂದರ್ಭದಿಂದ ಕಾನೂನು, ನ್ಯಾಯ, ಧರ್ಮ ಇವಕ್ಕಿರುವ ಅಂತರದ ಸ್ವರೂಪ ಸ್ವಲ್ಪಮಟ್ಟಿ ಗಾದರೂ ತಿಳಿಯಬಹುದು. ಪ್ರಬಲರ ತುಳಿತದಲ್ಲಿ, ಅಬಲರ ಅತಂತ್ರದಲ್ಲಿ, ಧರ್ಮ ದೀನವಾಗಿ ಸೊರಗುತ್ತದೆ. ಬಲ್ಮು ಧರ್ಮವನ್ನು ಮೆಟ್ಟಿ ಕೂಗು ತ್ತದೆ. ಧರ್ಮ ತಬ್ಬಲಿಯಾಗಿ ದಿಕ್ಕಿಲ್ಲದಾಗುತ್ತದೆ. ಇದನ್ನು ಕೈಹಿಡಿದು ನಿಲ್ಲಿಸಿದ ಹೊರತು ಲೋಕಕ್ಕೆ ಮಂಗಳವಿಲ್ಲ. ಧೀರರಿಗೆ, ನಿರ್ಭೀತರಿಗೆ

* ಇದೆಲ್ಲ ಅವರು ಆಡಿದ ಮಾತುಗಳ ಸಾಮಾನ್ಯ ಅನುವಾದ ಸಂಗ್ರಹ ಮಾತ್ರ.

ಅದಕ್ಕಾಗಿ ಕ್ಷಾತ್ರವಹಿಸಿ ಗೆಲ್ಲಬಲ್ಲವರಿದ್ದ ಕಡೆ ಮಾತ್ರ ಅದು ಫ
ಬಲ್ಲುದು. ಧರ್ಮವಲ್ಲದ ಶಕ್ತಿ ಧೂರ್ತತೆ. ಶಕ್ತವಲ್ಲದ ಧರ
ಜಳ್ಳು, ಬಂಜೆ.

ಕೆಲವು ಸಮಯಗಳಲ್ಲಿ ಒಂದು ಪದ್ಧತಿ ಸಡಿಲವಾಗುತ್ತ ಇನ್ನೊಂ
ಉತ್ತಮವಾದದ್ದು ರೂಪುಗೊಳ್ಳಬೇಕಾಗಿರುತ್ತದೆ. ಯಾವುದು ಖಚಿತವಾ
ಸರಿ ಎಂಬುದೂ ಸ್ಪಷ್ಟವಾಗಿ ನಿರ್ಣಯಿಸಲು ಆಗದೆ ಇರಬಹುದ
ನಾಲ್ಕಾರು ಬಗೆಯ ನಡತೆ ಪರೀಕ್ಷೆಯಾಗುತ್ತಿರುತ್ತದೆ. ಹಿಂದಿನದನ
ನಡಸಲು ಶಕ್ಯವಿರುವುದಿಲ್ಲ. ಮುಂದಿನದು ನಿಸ್ಸಂಶಯವಾಗಿರುವುದಿ
ಮುನ್ನಡೆಯ ಮಾರ್ಗ ತುಳಿಯಬೇಕಾಗಿರುವಾಗ ಹೆಚ್ಚು ಜನರ ಧಮ
ಬುದ್ಧಿಗೆ ವಿರೋಧವಲ್ಲದ್ದನ್ನು—ಅವರು ಸಹಿಸಬಹುದಾದ್ದನ್ನು ಕಾನ
ನಲ್ಲದಿದ್ದರೂ ಸಂಪ್ರದಾಯವಲ್ಲದಿದ್ದರೂ ನಡಸಬಹುದು ಎಂಬ ತಾಳ
ಬೇಕಾದೀತು. ಅದು ಕಾನೂನಿಗೆ ವಿರುದ್ಧವಾಗಿದ್ದರೆ ಕಾನೂನು ಅದನ
ಕಠೋರವಾಗಿ ಗಮನಿಸದೆ ಕಣ್ಣುಮುಚ್ಚಿ ಇರಬೇಕಾಗುತ್ತದೆ. ಹೊಸ ನಡ
ನಡೆಯುವವರನ್ನು ಶಿಕ್ಷಿಸುವ ಬದಲು 'ನಡೆದರೆ ತಪ್ಪಲ್ಲ, ಶಿಕ್ಷಾರ್ಹವಲ್ಲ
ಎಂಬಂತೆಯೇ, ಅದನ್ನು ಗಮನಕ್ಕೆ ತಂದುಕೊಳ್ಳದೆ ನೆರವು ಕೊಡಬೇಕಾಗ
ತ್ತದೆ. ಇಂಥ ಸಂದರ್ಭಗಳಲ್ಲಿ ವ್ಯಕ್ತಿಗಳಿಗೂ ಸಮಾಜಕ್ಕೂ ಆಗುವ
ನಷ್ಟಗಳನ್ನು ತುಂಬಿಕೊಡುವ ಆವರಣವನ್ನು ಕಲ್ಪಿಸಬೇಕಾಗುತ್ತವೆ
ಯಾವುದನ್ನು ಉದಾಸೀನವಾಗಿ ಕಾಣಬಹುದು, ಯಾವ ಸಂಬಂಧದಲ್ಲಿ
ನೋವು, ನಷ್ಟ ಆಗದ ಹಾಗೆ ರಕ್ಷಿಸಬೇಕು, ಯಾವುದನ್ನು ಶಾಸನ
ಮಾಡಿಸಬೇಕು, ಯಾವ ಶಾಸನ ರದ್ದುಮಾಡಿದರೆ ಮೇಲೆಂದು ಸೂಚಿಸ
ಬಹುದು, ಯಾವುದನ್ನು ಕಠೋರವಾಗಿ ಒಪ್ಪಿತವಲ್ಲವೆಂದು ನಿರಾಕರಿಸ
ಬೇಕು, ಯಾವುದನ್ನು ಶಿಕ್ಷಿಸಬೇಕು, ಶಿಕ್ಷೆಯಿಂದ ಏನನ್ನು ಮಾತ್ರ ಸಾಧಿಸ
ಬೇಕು ಮುಂತಾದುವನ್ನು ಗಮನಿಸುವುದು ಶ್ರೇಷ್ಠ ನ್ಯಾಯಸ್ಥಾನಗಳ
ಧರ್ಮಯೋಗ; ಅಲ್ಲಿನ ಕರ್ಮಕೌಶಲ. ಯಾವುದೇ ಸಂದರ್ಭದಲ್ಲಿ ಶಿಕ್ಷೆ

ಮೃದುವಾಗಬೇಕೆ, ಕಠಿಣವಾಗಬೇಕೆ ಎಂಬ ನಿರ್ಣಯವೂ ಪ್ರತಿ ವ್ಯವಹಾರದ ಸ್ವರೂಪದಲ್ಲಿ ಅಡಕವಾದ್ದು. ಶಿಕ್ಷೆಯ ಮಾರ್ಗವನ್ನು ಬಿಟ್ಟು ಕರುಣೆಯ, ತಿದ್ದುವ, ಇನ್ನೊಂದು ಅವಕಾಶ ಕೊಡುವ ಮಾರ್ಗದಿಂದ ಲೋಕಪ್ರಯೋಜನ ಹೆಚ್ಚೆಂದು ತೋರಿದಾಗೆಲ್ಲ ನಿಷ್ಠುರ ಮಾರ್ಗವನ್ನು ಬಿಟ್ಟು ಮೃದುವಿವೇಚನೆಗೆ ತೂಗುವುದೂ ನ್ಯಾಯಮೂರ್ತಿಗಳ ಅಧಿಕಾರಕ್ಕೆ ಒಳಪಡುತ್ತದೆ. ನ್ಯಾಯ ಪದ್ಧತಿಯಿಂದ ಜನದ ಹಿತವನ್ನೂ ಧರ್ಮದ ಮುನ್ನಡೆಯನ್ನೂ ಬಯಸುವವರು ರಾಮನ ವಿಷಯವಾಗಿ ಕವಿ ಹೇಳುವಂತೆ, ವಜ್ರಕ್ಕಿಂತ ಕಠೋರ ಮನಸ್ಸುಳ್ಳವರಾಗಿರಬೇಕು,—ದಂಡಪ್ರಯೋಗ ಅನಿವಾರ್ಯವಾದಾಗ; ಹೂಗಿಂತ ಮೃದುವಾಗಬೇಕು,—ಮಾನವತೆಯ ಅಗತ್ಯ ತೋರಿದಾಗ.

ಸಮಾಜಕ್ಕೂ ಕಾನೂನಿಗೂ ಅನಂತವಾದ ಸಂಬಂಧಗಳುಂಟು. ಸಮಾಜದ ಗುಣ ಹೇಗಿದ್ದರೆ ಕಾನೂನಿನ ಗುಣ ಹಾಗಿರುತ್ತದೆ. ಅದು ಜೀವಂತವಾಗಿ ದೊಡ್ಡ ದೃಷ್ಟಿ ಉಳ್ಳುದಾಗಿದ್ದರೆ ಕಾನೂನೂ ಹಾಗಿರುತ್ತದೆ. ಜನದ ಚರಿತ್ರೆಯ ಕನ್ನಡಿ ಅದರ ನ್ಯಾಯ, ಶಾಸನ. ಅದು ಬೆಳಸಿದಂತೆಲ್ಲ ಬೆಳೆಯುತ್ತದೆ. ಒಂದು ಜನಾಂಗದ ಸತ್ಯವನ್ನೋ ಧರ್ಮವನ್ನೋ ಕಾಣಬೇಕಾದರೆ ಅದರ ಕಾನೂನು, ನ್ಯಾಯಮಂಡಲ ಧರ್ಮವಿವೇಚನೆಗಳನ್ನು ಪರಿಶೀಲಿಸಿದರೆ ಸಾಕು. ಜೀವನಕ್ಕೆ ಎಷ್ಟು ಮುಖವೋ, ಪ್ರಕಾರವೋ, ವ್ಯಾಪ್ತಿಯೋ, ಅಷ್ಟು ಮುಖ, ಅಷ್ಟು ಪ್ರಕಾರ, ಅಷ್ಟು ವ್ಯಾಪ್ತಿ ಜನ ತಾವು ನಿರ್ಮಿಸಿಕೊಳ್ಳುವ ಶಾಸನ ಪ್ರಪಂಚಕ್ಕೆ. ಜನದ ಮನಸ್ಸು ಮಾತು ನಡತೆಗಳ ಮಟ್ಟಕ್ಕಿಂತ ಉನ್ನತವಾಗಿ ಅದರ ನ್ಯಾಯಶಾಸನ ಎಂದಿಗೇ ಆಗಲಿ ಏರಲಾರದು. ಆ ಮಟ್ಟವನ್ನು ಸಂತತವಾಗಿ ಎತ್ತಿ ಮನುಷ್ಯಲೋಕವನ್ನು ದೇವತ್ವಕ್ಕೆ ಎತ್ತುವ ಧಾರ್ಮಿಕಸಾಹಸ ಪುಣ್ಯಶಾಲಿಗಳ ಭಾಗಕ್ಕೆ ಬರುತ್ತದೆ. ನಯದಿಂದ ನ್ಯಾಯ, ನ್ಯಾಯದಿಂದ ನಯ; ಇವೆರಡರಿಂದ ಧರ್ಮ; ಧರ್ಮದಿಂದ ಈ ಎಲ್ಲ—ಪರಸ್ಪರವಾಗಿ ಬೆಳೆಯಬೇಕು,

